ಶೆಟ್ಟ್ರು—ಸರಿಪ್ರೋಯು! ದಾನ್ಕೇ ಕಾನ್‌ಸ್ಟೇಬ್ಲು, ಕಾನ್‌ಸ್ಟೇಬ್ಲೇ! ಇನ್‌ಸ್ಪೆಕ್ಟ್ರುಲು ಇನ್‌ಸ್ಪೆಕ್ಟ್ರುಲೇ! ಒಕ್ಕ ಕುಕ್ಕಕಿಂದ ನೂರು ಗೊರ್ರೆಲು ಕುರ ಬೋಡು ಪೆಟ್ಟೇ ಐಕಟ್ಟು....ಒಕ್ಕ ಇನ್‌ಸ್ಪೆಕ್ಟರ್ ಕಿಂದ.... ಮಿಮ್ಮಲ್ನಂತ ಪೆಟ್ಟುಂಡೇದಿ ಸರ್ಕಾರು" ಎಂದು ಹೇಳುತ್ತಲೇ ಪುಳ್ಳಯ್ಯನು ರೇಗಿ ಸೋಟಾ ವನ್ನು ಬೀಸುತ್ತ ಗುಡಿಯನ್ನು ನುಗ್ಗಲು ದೇವೀ ಸನ್ನಿಧಾನದಲ್ಲಿ ಜಪಾನ್ "ಇಮಿಟೇಷನ್ ಲಂಚ" ಕಟ್ಟನ್ನು ಹಂಚಿಕೊಂಡು ಮುಂದಿರುವ ಆದಿಶಕ್ತಿ ಯನ್ನು ತಿರಸ್ಕರಿಸಿ ಈಗಿನೀಚೆಗೆ ನಿನ್ನೆ ಮೊನ್ನೆ ಹುಟ್ಟಿದ, ಕೇವಲ ಮಹಾ ಲಕ್ಷ್ಮಿಯ ದಯೆ ಹಾರೈಸುತ್ತಾ ಒದ್ದಾಡುತ್ತಿದ್ದ, ಪಟೇಂಗರು, ಕೈಲಿದ್ದ ಎಲೆಗಳನ್ನು ಎಸೆದು....ಹಿಮ್ಮಡಿ ಕಚ್ಚಿ ಬರುತ್ತಿರುವ ಪುಳ್ಳಯ್ಯನ ಸೋಟಾ ಏಟುಗಳನ್ನು ತಪ್ಪಿಸಿಕೊಂಡು ಚಿಮ್ಮುತ್ತಿರುವ ಕಾಲಿಗೆ ತಮಗಿಲ್ಲದ ಬುದ್ಧಿ ಯನ್ನು ಉಪದೇಶಿಸುತ್ತ ಕಂಬಿ ಕೀಳುತ್ತಲೂ....ಏಕಾಂಗಿಯಾಗಿದ್ದ ದೇವಿಯ ಗುಡಿಯನ್ನು ಶೆಟ್ರು ಪ್ರವೇಶಿಸಿ ಗೋಷ್ಠಿಯನ್ನು ಪೂರೈಸಲು ಮಿಕ್ಕ ನಾಲ್ವರು ಬರುವಷ್ಟರಲ್ಲಿ, ದಿವಾಕರನು ಖಾನ್‌ಸಾಹೇಬ್ರ ಆಲೆಯನ್ನು ಹಾಸಿ ಆಗತಾನೆ ಶಾಮಣ್ಣನವರ ಗದ್ದೆಯನ್ನು ಬೆಳಗುತ್ತಿದ್ದನು.

ಭಟ್ಟ್ರು—ಇದೇನು ಶೆಟ್ರೇ, ಇನ್ನೂ ಐದು ಘಂಟೆಯಿಲ್ಲ; ನೋಡಿದ್ರಿ ಪುಳ್ಳಯ್ಯ ಪಟೇಂಗರ್ನ ಅಟ್ಕೊಂಬರ್ತಿದ್ದದ್ದು? ಸಾಹೇಬ್ರು ಆಲೇನೂ ಬಿಟ್ರು.... ಶೇಕ್ದಾರ್ರು ಆಫೀಸ್‌ನೂ ಬಿಟ್ರು ನನ್ನೂ ಬೋರಣ್ಣೋರ್ನೂ....ನಮ್ಮೆಲ್ಲರನ್ನೂ ಸಂಪ್ರದಾಯ ತಪ್ಪಿ ಇಷ್ಟುಹೊತ್ಗೇನೇವೇ....ಸೇರೋಹಾಗೆ........?

ಶೆಟ್ರು—ಯೇಮಿಮಾಲೇದೂ, ನೆನ್ನ ಮುಪ್ಪೈತೊಂಬಿದಿ ಜೀವಾಲು ಮಿಂಗಿನ ಪಯ್ಯಾಮು ಉಂಡೇ ಧರಣಾಮ್ಯಗಾರಿ ಯಿಲ್ಲು, ಪಾಡಯ್ಯಿಪ್ರೋಯಿನಿಲ್ಲು ....ಕಥ ಚಪ್ತಾನು ಅನೆ ಗೌಡ್ಲು....ವಿನೇದಿ ವಿನುವಲಾ....ಅಯ್ತೆ ನೆನ್ನೈಕಟ್ಟ ಮಬ್ಬುಲೋ ಲೇಕ.... ಎಲುಗುಲೋನೇ ವಿನಿ ಎಲುಗುಲೋನೆ ಇಂಟಿಕಿ ಪ್ರೋಯೇದಿ ಮಂಚಿದೀನಿ ಪಿಲ್ಚಿಂದಿ ಮಿಮ್ಮಲ್ನಂತ. ಯಿವರೇಮಿ ಚಪ್ತೇನೂ ಪ್ರಾಣಭಯಮು.... ತಜ್ಜನ್ಮಮು.... ಮನುಷಿಕಿ.... ಕಾದಾ ಗೌಡೋಳ್ಳು!? ಚಪ್ಪಂಡ ಕಥ.

# ಬೋರೇಗೌಡನ ಕಥೆ

ನಾನೇಳ್ದಂಗೇ....ಬಟ್ರಿಗೆ ಓಟೀ ಓಟು ಗೊತ್ತು. ಚಿಕ್ಕ ಐದ ಆಗ. ಶಾಮಣ್ಣೋರೂ ನಾನೂ ಪ್ರಾಯದ ಉಡುಗರು, ಸಾಬ್ರೆ; ಈಗ ಕುಗ್ಗವ್ರೆ ಶಾಮಣ್ಣೋರು. ಆಗ್ನೋಡಿರ್ಬೇಕ್ರಾ ಅವರ ಜಿಸುಮು. ಉಕ್ಕು ಜಾತಿ ಕಾಲುಕ್ಕೈಯ್ಯಿ ಗರ್ದನ್ನು. ಒಂದೇ ಗಲ್ಲಿ ನಾವಿಬ್ರೂ. ಕಲೀಫ್ ಪೀರ್‌ಪಾಚಂದು. ಧರಣಯ್ಯನೋರ್ದು ಎದುರು ಗಲ್ಲಿ. ಎಲ್ಲಾ ಗಲ್ಲೀನೂ ನಮ್ಮ ಕಲೀಫರ್ನ ಬುಡ್ರು. ಖಸಾಬ್ ಮುರ್ತುಜಾಲಿ ಅವಂದೊಂದುಗಲ್ಲಿ ಮುಸಲ್ಮಾನರ್ದು. ಇಜೀದಶಮ್ಮಿದಿನ ನೋಡ್ಬೇಕ್ರ ದೊಡ್ಬಳೀ ಕುಸ್ತಿ. ನಲವತ್ತೆಂಟು ಜೋಡಿ ತೀರಿದ್ಮೇಲೇನೇವೇಯೋ ಮನೇಗ್ಬರೋದು. ವರ್ಸಾ ವರ್ಸಾನೂ ಆದತ್ತು. ಗಲ್ಲಿ ಗಲ್ಲೀಗೂ ದುಸ್ಮನಿ ಯೇಟಿದ್ರೂನೂವೇ....ದೋಸ್ತೀನೂ ಇತ್ತು. ಈ ಮೂರು ಗಲ್ಲಿಲೂವೆ ಕಿಲಾಡಿ ದರಣಯ್ಯನೋರ ಗಲ್ಲಿ ಕಲೀಫ ಫೇಕ್ ರಂಗಯ್ಯ, ರುಸ್ತುಂ. ಕುಸ್ತಿ ಆಗ್ಲಿ ಈಜೋದಾಗ್ಲಿ ಪಟ್ಟವರ್ಸೆ ಆಗ್ಲಿ....ಅವನ್ನ ಮಾರಿಸ್ದೋರು ಉಟ್ಲಿಲ್ಲ ಇನ್ನುಟ್ಟಾಕಿಲ್ಲ. ಬಾರುದ್ದ ಕೋಲು ಕೈಲಿ ಇದ್ಬಿಟ್ರೆಗಾನ ಊರೆಲ್ಲಾ ಕಲ್ಲುಗಳು ಬೀರ್ತಿರ್ಲಿ ಒಂದ್ಕಲ್ಲಾಗ್ದೆ ಸಿಬಾಯಿಸ್ಕೊಳ್ಳೋನು .... ರುಸ್ತುಂ. ಆದ್ರೆ ದುಡ್ಕೋದು ಅವನ ಐಬು. ಮೈನೂ, ಗುಂಡ್ಗೆನೂ, ಉಕ್ಕು, ಸಿಂವುದಂಗೆ. ಭತ್ತದ್ಹೋಡ ತೊಟ್ಕೊಂಡು ಕಾಲ್ಗೆ, ಉಲಿಯಾಸ ಕಟ್ಟಾನೆ ಮೂರು ಗಲ್ಲೀ ಮುಂದೂನೂ. ಕುರಿಮರಿಗಳ್ನ ಬುಟ್ರೇ ಅಂಗಂಗೆ ಬಾಯಾಗೆ ಕಚ್ಕೊಂಡು ಭಿರ್ಕಾಯಿಸ್ತಿದ್ದ....ಫೇಕ್ ರಂಗಯ್ಯ!

ಗಡF ಖಾನ್—ಹಾಂ ಬೋರಣ್ಣಾ, ಬಕ್ರಿಯೋಂಕೂ :ದಾತೋಮೆ ಚಾಕ್ ಲೇಕೇ ನನ್ದು ಬಚ್ಪನ್ ಮೆ ದೇಖ್ಯಾಹೂಂ! ಫೇ ರುಸ್ತುಮೋ ಉನ್ ದಿನೋಮೇ...ಈವಾಗ ಹಂಗೆ ಯಾರೂ ಬೋರಣ್ಣಾ ?!

ಬೋರಣ್ಣ — ಈಗಲಾ!? ಅಂಚೀಕಡ್ಡೀ ಅಂಗೆ ಜಿಸ್ಮು ಇರೋ ಒಣಕಲ್ನನ್ಮಕ್ಳೆಲ್ಲಾ ಉಸ್ತಾದುಗಳು .. ಈ ಬೈಸ್ಕಲ್ಲೂ ಬಂದೂಕೂ ಬಂದ ಕಾಲ್ದಲ್ಲಿ....ಆದರಿದ್ಕೇಕ್ರ....ಜುಮಾರತ್ತು... Fಾತ್ಯ; ನಮ್ಗಲ್ಲೀಲಿ ಮುರ್ತು ಜಾಲೀನೂ ಇದ್ದ....ರಂಗಯ್ಯನೂ ಇದ್ದ. ಪಕ್ಕರ್ ಫಾತ್ಯಾಕೊಡಿಸಿ ಒರಗ್ಬಂದು

....ಕೊತ್ತಿ. "ಇದ್ಯಾಕಿಂಗೇ"? ಅಂದ ರಂಗಯ್ಯ. ಪೀರ್ಪಾಚಾ "ನಮ್ಗಲ್ಡೀಲಿ ಆಡತ್ತು ; ಜುಮ್ಮಾರತ್ ಫಾತ್ಯಾ ತೀರ್ಸ್ಕೊಂಡು ದೀಪ ಆರ್ಸಿ ಒರಕ್ಬಂದು ಬಾಕ್ಲಾಕ್ಕೊಂಡು ಕೂತ್ಕೊಳ್ಳೋದು. ಗಲ್ಡೀಒಳ್ಗೆ ಅಸುಮ ಭೀಮ ಇಬ್ರು ಲಡತ್ ಸದ್ದು ಕೇಳ್ತೈತೆ" ಅಂದ. ಯೇಳ್ತಾನೇವೇ ಒಳ್ಗೆ ಗರಡನ್ಮೇಲೆ ಕಂಚಿ, ತೊಡೇಮೇಲ್ಕೈ, ಬುಜಕ್ಬುಜ, ಲಗಾಯ್ಸ್ಕೊಂಡು ದೊಡ್ಜೋಡಿ ಕುಸ್ತಿ ಅಗೋ ಸದ್ದು ಆಗ್ತಾಅಯ್ತು! ಒಳ್ಗೆ! ನಂಬ್ಕೆಯಿಲ್ಲ ರಂಗಯ್ಯಂಗೆ. "ಇದು ಸುಳ್ಳು! ಏನೋ ಇಕ್ಮತ್ತು... ಸಾಬೀತಾಗ್ಬೇಕು ಈಗ!" ಅನ್ಕೊಂಡು ಒಂದೇ ಗುದ್ದು....ಬೀಗ ಸಲಾಕಿ ಸಮೇತ ಬೂಪ ತಿರುಗ್ಸಿ ಎಸ್ದು ಒಳಕ್ನುಗ್ದ! ಬೆದರ್ಕೊಂಡು ನಿಟ್ಟುಸ್ರು ಬುಡ್ತಾ ಕೂತ್ಕೊಂಡಿದ್ದ ನಮ್ಕಿವೀಗೆ ಕೇಳ್ಬಂತು ಒಂದೆಳ್ಡು ನಿಮಿಸ್ದಲ್ಲಿ ಒಂದ್ಕಿರ್ಲು....ರಂಗಯ್ಯಂದು "ಅಯ್ಯೋ" ಅಂತ. ಬೆಂಕಿ ಕಡ್ಡಿ ಗೀಚ್ಕೊಂಡು ಒಳಕ್ನುಗ್ಗಿದ್ವಿ. ದೀಪ ಅಚ್ಚಿದ್ವಿ. ಸುತ್ಮುತ್ತ ನೋಡಿದ್ರೇನೋ ಯಾವಾಗ್ಲೂ ಯಂಗೋ ಅಂಗೇ! ಮಲ್ಕಂಬ ಇದ್ಕಡೇನೇವೇ. ಅಕಾಡ ಲಾಲ್‌ಮಟ್ಟೀ ತುಂಬ ಬಾರ್ ಬಾರ್ ಅಗ್ಲ ಎಜ್ಜೆಗ್ಳು ಅನುಮಂತಂದು ಬೀಮ್ಸೇನಂದು. ಅಲ್ಲಿ ಅವರಿಬ್ರೂ ಮೆಟ್ಟಿದ ಕಡೆಯೆಲ್ಲಾ ಬಿದ್ದ ಅಕ್ಕಗ್ಳು. ಆದ್ರೆ ಯಾವ ಜುಮ್ಮಾರತ್ತೂ ಇಲ್ಲದ್ದು ಒಂದು, ನಮ್ಗಲ್ಡೀಲಿ, ಗೋತ ಆಕ್ದ ಸಾದ್ನೆ ಮೂಲೇಲಿ. ಯೆಣ! ರಂಗಯ್ನೆಣ! ಬಾಯ್ತುಂಬ ರಕ್ತ! ಎದೆ ಎಲುಬೆಲ್ಲಾ ಚೂರ್ಚೂರು! ಅಂಗಾತ ಬಿದ್ದವ್ನೆ. ಅವನ್ಮೇಲೆ ಬೆಟ್ಟ ಬಿದಿದ್ರೆ ಎಂಗೋ....ಅಂಗೆ! ಇನ್ಯಾರೇನು ಮಾಡೋದು! ಪೋಲೀಸ್ ಬಂದ್ರೆ ಯೇನು ಡಾಕ್ಟ್ರು ಬಂದ್ರೆ ಏನು! ಗಲ್ಡೀ ಗಲ್ಡೀನೆ! ಸಾಕ್ಷಿಗಳು ಒರ್ಗೆ. ಒಳಕ್ನುಗ್ದೋನು ಯೆಣ! ಗಲ್ಡೀಲಿ ಯಾರೂ ಇಲ್ಲ! ಮುಚ್ಕೊಂಡೋಯ್ತು. ಆದ್ರೆ ದರಣಯ್ನೋರು ತನ್ನ ಗಲ್ಡಿ ಕಲೀಫ ನಮ್ಗಲ್ಡೀಲಿ ಸತ್ತಾಂಬೊ ಸೇಡು ಇಟ್ಕೊಂಡು ....ಕೇಸಾಕ್ದ್ರು ನಮ್ಮೇಲೆಲ್ಲಾ. ಊರೆಲ್ಲಾ ಅವರ್ಕಡೆ.. ಆದ್ರೆ ಕಚೇರೀಲಿ ಕುಲಾಸೆ ನಾವೆಲ್ಲಾ. ಆದ್ರೂನೂವೆ ಮೂವತ್ತೊಂಬತ್ತಿನ ಲಾಕಪ್‌ನಲ್ಲಿದ್ವಿ ನಮ್ಗಲ್ಡಿಯೋರೂ ಕಸಾಬ್ ಮುರ್ತಿಜಾಲಿ ಗಲ್ಡಿಯವ್ರೂ. ಒಟ್ಮುಪ್ಪತ್ತೊಂಬತ್ಜನ ಮನೆ ಮಕ್ಳೂ ಮರೀ ಬುಟ್ಟು....ಒಬ್ಬನ್‌ಸಾವ್ಗೆ ಮೂವತ್ತೊಂಬತ್ಜನ ಗಲ್ಲೋಗ್ತೇವೋ ಅಂಬೋ ಎದರ್ಕೇಲಿ ನಡುಗ್ತ ಬಿದ್ದಿದ್ವಿ ಲಾಕಪ್‌ನಲ್ಲಿ. ಊರೂರೇ ದರಣಯ್ಯನ ಕಾಲಿಗ್ಬಿದ್ದು ಬೇಡ್ಕೊಂಡ್ರೂವೆ ಕೇಳವಲ್ಲ, ದುಡ್ಡು

ನೀರು ಸುರಿದಂಗೆ ಸುರಿದು....ಮದರಾಸ್ ಕಡೆಯಿಂದ ಲಾಯ್ರುಗಳ್ ತರ್ಸಿ.... "ನನ್ಗಳ್ಳಿ ಫೇಕ್ ರಂಗಯ್ಯ ಸತ್ತದ್ದಕ್ಕೆ ಸಿಪಾಯ್ತ್ರುಬ್ರಗಳ್ಳೀನೆಲ್ಲಾ ಗಲ್ಲಿಗೆ ಸಾಗಸ್ಬಿದ್ರೆ ಗಂಡ್ಸಲ್ಲಾ ನಾನೂ"ಂತ ನೀರು ಸುರಿದಂಗೆ ದುಡ್ಡ್ನ ವರ್ದಿ ನಡಸ್ದ ಮೊಕದ್ದಮೆ. ದೇವ್ರು ಏಟು ಐಸ್ವರ್ಯ ಕೊಟ್ರೂ....ಮಕ್ಕುಮರ್ಯೋರ್ನು ....ತನ್ನಂಗೇ ಮಕ್ಳು ಮರಿ ಇರೊ ಗರೀಬರಮೇಲೆ ರೋಷ ಕಟ್ಬಾರ್ದು! ದೇವರ್ದಯೆ....ನಮಗ್ನಾವೆ ಸಾಕ್ಷಿ....ಸೆಷನ್ ಕೋರ್ಟ್ನಲ್ಲಿ. ಕಾಲಿಗಲ್ಲಿ.... ಒರಗ್ನಾವ್ರು. ಒಕ್ಕಲ್ನಗ್ಬೋನೊಬ್ಬ!....ಯೆಣಾನ ಅಪ್ಪಾಷಿಮೊಡ್ದ ಪರಂಗಿ ಡಾಕ್ರು....'ಸೂರ್ಯನ ಮೇಲ್ಬಿದ್ದಿದ್ರೂ ಇಂಗ್ರ್ಯೋರ್ಕೆಲ್ಲ ಈಟು ಗಟ್ಬಾಗಿದ್ದ ಮನಸ್ಸನಜಾತಿ ಎಲ್ಬಿಗ್ಳು'ಂತ ಕೈಬೀತು....ಇನ್ನೇನು ಕುಲಾಸೆ ನಾವೆಲ್ರೂವೆ. ಅವತ್ತಿಂದ ಅದೇನ್ಬಿಶಾಚಿ ಯಿಡೀತೊ ದರಣಯ್ಯನ್ನ, ಅವನ್ಮನೆತನಾನೆ ಮಣ್ಣು. ನೆನ್ನೆ ಯೇಳ್ದಂಗೆ ಆ ಓಣಿ, ಆ ಅರ್ದಮುರ್ದ ಸುಂಕದಕಟ್ಟೆ.... ಮೂವತ್ ನಲವತ್ ಜನ ಅಗ್ಲೂ ರಾತ್ರೀ ಎರಡೊತ್ತೂನೂವೆ ಒಟ್ಟೆ ತುಂಬ ಉಂಡು ಕೈತೊಳ್ಕೀತಿದ್ದ ಆ ಮನೆ ಯೆಷ್ಟೀ ಅಲ್ದೆ, ಮೂವತ್ತೊಂಬತ್ ಜೀವ ಓದ ಆ ಮನೆ, ಈಟೆ ಬಾಕಿ.

ಶೆಟ್ರು—ಅಯ್ಯೊ ಯೇಮಿ....ಮುಪ್ಪೈತ್ತೊಮ್ಮಿದಿ ಜೀವಾಲು ಪೋಡ್ಡಾಯಿನಾ ....ಆ ಯಿಂಟ್ಲೋ?

ಬೋರಣ್ಣ—ಹೂಂ, ಅದೇ ಕತೆ ಯೇಳೋದು ನಾನು.

ಶೆಟ್ರು—ಯೇಮಿ ಒಕಿಂಟ್ಲೊ ಮುಪ್ಪೈತ್ತೊಮ್ಮಿದಿ ಪೀನುಗುಲಾ! ದೇವುಡೇ ಗತಿ! ಗೌಡ್ರು, ಚಪ್ಪೇದೈತೆ....ವೇಗ್ರ ಚಪ್ಪಂಡ....ಕಥ.

ಬೋರಣ್ಣ—ಮೂವತ್ತೆಂಟೆಣಗ್ಳು ಬಿದ್ದಿದ್ದು ಕೇಳಿದ್ನಿ....ಮನೆಯಿಂದೂ ರ್ಗೊಟ್ರು ಅಮಲ್ದಾರ್ರು ಪಂಚಾಯ್ತಿಯಿಟ್ಟು ತನ್ಕೆ ಮಾಡಿ ಮಸಾಣಕ್ಕೋ ಮಣ್ಣಿಗೋ ಸಾಗ್ಸಿದ್ದು ನೋಡಿದ್ನಿ. ನನ್ಗೆ ಖುದ್ದಾಗಿ ತಿಳ್ದು ಓದ ಮೂವತ್ತೊಂಬತ್ನೇ ಜೀವದ್ಕತೆ ಯೇಳ್ತಿರೋದು ಈಗ. ಇಲ್ಲಿರೊ ಈ ನಮ್ಮ ಸಾಮಣ್ಣೋರು ಒಬ್ರೇ ಸಾಕ್ಸಿ....ಒಂದ್ರಾತ್ರಿ ನಮ್ಕಣ್ಣೆದ್ರುಗೇನೇ ಒಂಜೀವ ಓದ ನನ್ನತೇಗೆ.

ಫೇಕ್ ರಂಗಯ್ಯ ಸತ್ತು ಒಂದ್ವಾರ್ದೊಳ್ಗೆ....ನಾವೆಲ್ಲಾ ಲಾಕಪ್‌ನಲ್ಲೇ ಇದ್ವಿ .... ದರಣಯ್ಯನ ತಮ್ಮನ ಮದುವೆ ಆದ ರಾತ್ರಿ ಮನಿಕ್ಕೊಂಡವ್ರೆ ನೂರಾರ್ ಜನ. ಬೆಳಿಗ್ಗೆ ಏಳೊತ್ಗೆ ಮದವಣಿಗ-ಮದವಣಿಗಿತ್ತಿ, ಬೀಗ-ಬೀಗ್ತೀರು ಆರು ಜನ ಒಟ್ನಲ್ಲಿ ಯೆಣಗ್ಳು ಬೆಳಕರೀತ್ಲೂವೆ! ಅಪ್ನೂ, ಅಮ್ಮೂ, ತಮ್ಮೂ, ಒಸೆಂಡ್ತೀನೂ, ಅವಳಪ್ನೂ, ಅಮ್ನೂ, ಮಸಾಣಕ್ಕೆ ಸಾಗಿಸ್ತಿದ್ವಾಗ್ಲೇ ....ಶ್ರೀಕಂಟದೇವ್ರ ಪೂಜಾರಿ ಬಡ್ಕೊಂಡ! "ಮನೆ ಬುಟ್ಬುಡು ಆ ಮನೇಲಿ ಒಂದ್ರಾತ್ರಿ ಇರ್ಬಾರ್ದು" ಂತ. ದರಣಯ್ಯನಟ ಕೇಳ್ಲಿಲ್ಲ. ಮೂರನೆ ಬೆಳಿಗ್ಗೆ ಎಂಡ್ತೀನೂ ಮಗನೂ.... ಒಬ್ನೇ ಮಗ....ವಾಂತಿಬೇದೀಲಿ ಫಟ್ಟ. ಮನೆ ಬಿಟ್ಟ ಆಮೇಲೆ. ಅಂಗೋ ಇಂಗೋ ಮುವ್ವತ್ತೇಳ್ಜನ ಒಟ್ಟು ತಿಂದದ್ದು ಬಲಿ ಆ ಮನೇಲಿ ಇದ್ದ ಭೂತ. ಆಟೋತ್ಗೆ ದರಣಯ್ಯನೂ ಇಲ್ಲ; ಮನೆಯೋರೂ ಇಲ್ಲ. ಅವರ ದಾಯಾದಿ ಚನ್ರಾಯ್‌ಪಟ್ನ! ವಾರಸ್‌ದಾರ.... ಮನೆ ಮಾರಾಕೋಗಿ ಕೊಂಡ್ಕೊಳ್ಳೋಯೋರ್ಗರೂ ಯಿಲ್ದೆ ಮನೇಸ್ಕೀಳಸ್ಬೇಕೂಂದ. ಅವನಿಕ್ಕಿದ್ದದ್ದು ಊರು ಮುಂದಿನ ಗಂಧದ ಕಾಶಿಪತಯ್ಯನ ಛತ್ರ. ಛತ್ರದ ಕಾವಲುಗಾರ ಏಳ್ದ್ಕಥೆನೆಲ್ಲಾ ನಂಬ್ಲಾರ್ದೆ ನನ್ನೂ, ಕಸಾಬ್ ಮುರ್ತಿ ಜಾಲೀನ್ನೂ ಇಲ್ಲಿರೋ ಸೇಕ್ದಾರ್ ಶಾಮಣ್ಣಾವರ್ನೂ ಕರಸ್ದ. ಓದ್ವಿ. ಮನೆ ಕತ್ಯೆಲ್ಲಾ ಏಳಿದ್ವಿ. ಆದ್ರೇನು? ದರಣಯ್ಯನ ರಕ್ತ....ಅಟ! ನಂಕತೆ ನಂಬ್ಲಿಲ್ಲ! "ನಿಮ್ಮನೇಗೆ ಸುಂಕದ ಕಟ್ಟೇಂತ ಯೆಸ್ರು. ರಾತ್ರಿ ತಂಗಿದ್ರೆ ಒಂಜೀವನಾದ್ರು ತಿನ್ನೊ ದೆವ್ವ ಇರೋ ಮನೇ" ಂತ ಏಟೇಳಿದ್ರೂ ಕೇಳ್ವಲ್ಲ. 'ದೇವ್ರಮುಂದೆ ದೆವ್ವಾನೆ?" ಂತ ಅಂದು "ಈವತ್ತು ರಾತ್ರಿ ಆ ಮನೇಲೇ ಮನೀಗ್ಕೊಳ್ಳೋದ್ದಾನು....ನೀವು ಮರ್‌ದುಗಳಾದ್ರೆ ಮೂವ್ರೂ ಬನ್ನಿ! ನೋಡೇಬಿಡೋಣ ಈ ದೆವ್ವದ ಜೂರತ್ನ!" ಅಂತ ಶಾಲೊದ್ಕೊಂಡು ಒಂದ್ಕೈಲಿ ಒಂದಿಂಬು, ಇನ್ನೊಂದ್ಕೈಲಿ ಒಂದು ಲಾಟೆಂಗು ಇಡ್ಕೊಂಡು ಬಂದೇಬುಟ್ಟ ಬೂಪ! ಈಗ್ನಾವೇನ್ಮಾಡೋದು? ಓಡ್ಬಾರ್ಳಾಗೋಗ್ಲೀರಿತನ್ಕೊಂಡು ನ ವ್ಮ ಟ್ಗೆ ಬಂದ್ಬುಟ್ರೋವೇ ಊರ್ಗೆಲ್ಲಾ ಪಿರ್ಕಿಪಟ್ಟ ಚನ್ನರಾಯಪಟ್ನಣದೋನ್ಕೈಲಿ? ಯಿಲ್ಲಾ ಈ ಉಚ್ಚನ್ ಜೊತೇಗೆ ನಾವೂ ಓದ್ರೋವೇ....ನಮ್ಮಲ್ಲೊಬ್ರು ಯೆಣ ಅಂಬೋದು ಗುಂಡ್ಗೆ ಯೇಳ್ತದೆ. ಆದ್ರೆ ಮಾಡೋದೇನು? ಮರದ್‌ಗಳು ನಾವ್ಮೂವರು ಚನ್ರಾಯಪಟ್ನಾಕ್ಕಾ ಬುಟ್ಕೊಡೋದು ನಂಬುಳ್ಳಾಪುರದ ಗೈರತ್ನ!

ಒಂಟ್ಬಿ ಅವಯ್ಯನ್ ಜೊತೇಲಿ! ಆ ಆರ್ ಮನೇಗೆ ಓಗ್ಬುಟ್ಬಾಗ್ಲೇನೇವೇಯೋ ಸಾಮಣ್ಣೋರು ಏಳಿದ್ರು. ಎಂಗೋ ಬಯ್ತು, ಸಿಗ ತಪ್ಪಿ ಸಿಡ್ಡಿ ಮಾಡಿದ್ರೇನೇವೇ ಅಪಾಯ, ಎಂಗಾದ್ರೂವೇ ಅಲ್ಕಚ್ಕೊಂಡು ಜಾಗರ್ತೆ ಮಾಡ್ಕೊಂಡಿದ್ಬುಟ್ರೆ ವೈಯಿಲ್ಲದ್ದೆವ್ವ ನಮ್ಮನ್ನೇನ್ಮಾಡೀತು. ಒಂದಿಸ್ಪೇಟ್ ಕಟ್ಬು ಇಟ್ಕೊಂಡು.... ಪಟ್ಬ್ಯುಟ್ಬೋ ಇಪ್ಪತ್ತೆಂಟೋ ಆಡ್ತ ರಾತ್ರಿ ಕಳೆದ್ಬಿಡೋಣ ಅಂತೇಳಿದ್ರಕ್ಸರಿ ಯಾಗಿ ಇಸ್ಪೇಟಾಡ್ತಾ ಕೂತಿದ್ದೀವಿ ನಾನೂ ಮನೆಆತ್ನೂ ಜೊತೆ, ನಮ್ಮೆದ್ರು ಮುರ್ತಿಜಾಲಿ ಸಾಮಣ್ಣೋರು. ಎಲ್ಬು ಕರಿ ಕರ್ಪ್‌ಸೆಟ್ ಆಯಿತು ಅವರ್ಗೆ. "ಇದೇನೋ? ಕಾಸಿಲ್ಲಾಟ! ಜೋರಿಲ್ಲ"ಂತ ಮನೆಯಾತ ಜೋಬಿಂದ ನಲವತ್ತು ರೂಪಾಯೆತ್ತಿ....ನಾವು ಅತ್ತತ್ತ್ರೂಪಾಯಿ ಅಂಚ್ಕೊಂಡು ತಿರ್ಗಾ ಷುರು ದುಡ್ಡಿಗಾಡಾಕೆ. ಆಡ್ತಾ ಆಡ್ತಾ ಇದ್ವಿ....ಗೆಪ್ತಿ ಐತಾ ಸಾಮಣ್ಣೋರೇ.... ಮುರ್ತಿಜಾಲಿ ತಲೆದೂಗ್ತ ಆಕಳಸ್ತ ಅವನ್ಮುಂದಿದ್ರೂಪಾಯಿಗಳ್ನ ನಮ್ಕಡೆ ತಳ್ಳಿ "ನೀವಾಡ್ಕೊಳ್ಳಿ....ಅಲ್ಲಾಹೊ! ಅಲ್ಲಾಹೊ!"ಂತಾನೆ ಬಿದ್ಕೊಂಡು ನಿದ್ದೆ. ತಿರ್ಗ್ನೂವೆ ಸಾಬಿದುಡ್ನ ಮೂವ್ರೂ ಅಂಚ್ಕೊಂಡು ಆಟ್ತಿದ್ದೀವಿ.... ಸಾಮಣ್ಣೋರು ಆಕ್ತಿದ್ದ ಒಂದೊಂದೆಲೇಗೂ ಆಕಳಸ್ತ "ರಾಗ್ಬಾ! ರಾಗ್ಬಾ!"ಂತ ಬಾಯ್ಗೆ ಚುಟ್ಕೆ ಒಪ್ಪಿಸ್ತಾ...."ದಿನವೆಲ್ಲಾ ಬಿಸುಲಿನಲ್ಲಿ ತಿರುಗ್ಬಿ....ನಿದ್ದೆ ....ನೀವ್ನೀವೇ ನೂರೆಂಟು ಆಡ್ಕೊಳ್ಳಿ"ಂತ ಗೊಣಗುಟ್ತ ಬಿದ್ಕೊಂಡು, ನಾನು· ಕಟ್ಬಿ ಕಲ್ಸಿ ಕಟ್ ಮಾಡಿಸ್ಕೊಂಡು ನನ್ಗೆ ಮನೆಯಾತನ್ಗೆ ಅಂಚ್ತಿರೂ ನನ್ನ ಬೆಳ್ಳ — ಭುಜಾನೂ ಸೋರ್ತ್‌ಬೀಳ್ತಿದ್ದದ್ನ .... ನನ್ತಲೆ ನಿದ್ದೇಲಿ ತೂಗೋದ್ನ....ನೋಡ್ದ ಅವಯ್ಯ....'ಇದೇನ್ರಿ ದೆವ್ವ ಇರೋ ಮನೆ ಅಂದ್ರಿ ....ನನ್ಜೊತೇಲಿ ಬಂದ ನಿಮ್ಮೋವ್ರಲ್ಲಿ ಇಬ್ರೂ ನಿದ್ದೆವೋಗಿ ನೀವೂನೂ ತಲೆ ತೂಗ್ತಿರೋದು .... ಇದೇನು ನನ್ನ ಬೆದರ್ಸೋಕೆ ಅಂತ ಮಾತಾಡ್ಕೊಂಡು ಮಾಡ್ತೀರೋ ತಮಾಷೇನಾ'? ಅಂದ. ನನಗ್ಯಾಕೋ ಕಣ್ಣು ಒಂದ್ಕಡೆ ಕಬ್ಬಕಡ್ಣಂಗೆ ಇಳೀತಿದೆ ನಿದ್ದೆ ಬಾರ. "ಅಲ್ಲಾ ಸ್ವಾಮಿ ಸತ್ತಾಗೂನೂ ನಿದ್ದೆ. ದೀಪ ಇಳಿಸಿ ಮನಿಕ್ಕೊಳ್ಳಿ ನಮ್ಮಂಗೇನೆ" ಅನ್ಕೊಂಡು ಕಾಲುಗಳ್ನ ಚಾಚ್ದೆ; ಆವಯ್ಯನ್ಮುಕ ಕಣ್ಣುಗಳ್ನ ಕತ್ಲೆಕಂಡ ಕೂಸಿನ್ಮುಕದಂತೆ ಆಗಿ....ಕೈ ನಡಗ್ತ ನಾಲ್ಗೆ ತೊದಲ್ತ...."ಅಯ್ಯೋ....ಗೌಡ! ನಿಮ್ನಿಮ್ಮಲ್ಲಿ ಇದೇನೋ ಪಿತೂರಿ! ದೆವ್ವಾಂತೀರಾ ಮನೇಲಿ ಹತ್ಮುವ್ವತ್ತು ಹೆಣಗಳ್ನ ಬಿದ್ವು ಅಂತೀರ ನಡ್ರಾತ್ರೇಲಿ

ನಂಜೊತೇಲಿ ಬಂದ್ನೀವ್ರು ಸಿದ್ರೆ ಅಂತ ನಕ್ಸ್ಪಿ ಬೆದರ್ಸೋಕ್ನೋಡ್ತಿರಾ ನನ್ನ! ...............ಬೆದ್ರೋನಲ್ಲ ನಾನು!" ಅನ್ಕೊಂಡು ಒಂದು ಸಿಗರೇಟು ಜೇಬಿ ಸಿಂದ ತೆಗೆದು ಬಾಯಾಗಿಟ್ಕೊಂಡು ಒಂದ್ಬೆಂಕೀ ಕಡ್ಡಿ ಗೀಚಿ ನಸ್ನಗ್ತ ನನ್ನೋಡ್ತ .... ಕಡ್ಡೀನ ಸಿಗ್ರೇಟ್ಗೆ ಅಚ್ತಿದ್ದಾಗ್ಲೇನೇವೇ ಅಜಾರ್ದಲ್ಲಿ ಒಳ್ಳೆ ಕಂಚಿನ್ ಸರಪ್ಳಿ ಕದಲಸ್ದಂಗೆ ಸದ್ದು ಆಗತ್ಲೂವೇ ನನ್ಕೈಕಾಲುಗ್ಳು ನಡುಗ್ತ "ದೇವ್ರೇ! ಶ್ರೀಕಂಟಾ! ಇದೇನ್ಬಂತೂ! ಕಾಪಾಡಪ್ಪಾ! ನನ್ತಂದೇ!" ಅಂತ್ಕಿರಲ್ಟೆ ನನ್ಬದರ್ಕೇಲಿ. ಅನಯ್ನೋ ತಟ್ಕಿದ್ದು.......ದೀಪಾನ್ಕೈಲಿತ್ಕೊಂಡು ........"ಕತ್ಲೇಲಿ ಸಾಯ್ರು........ಮೂರು ಪ್ರಾಣಿಗ್ಳು, ಸಿದ್ದೇಲಿ ಬಿದ್ದಿರೋವಾಗ ನಾನೊಬ್ನೇ ಇಲ್ಲಿರೋದು ಆಸಿ" ಅನ್ಕೊಂಡು....ದೀಪಸ್ಸಮೇತ........ಏಳಾಕೆ ಮರ್ತೆ; ಮನೆಮಾಡಿ ಮೇಲ್ನ ದಿವಾನ್ಖಾನೇಲಿ ಕೂತಿದ್ವಿ ನಾವು-- ಏಳ್ದಂಗೇ ದೀಪಸ್ಸಮೇತ ಕಿರುಬ ಅಟ್ಟಿದ ಕಡಬಂತೆ ಬಡಬಡಾಂತ ಮಾಡಿ ಮರದ್ಮೆಟ್ಲು ಇಳ್ಕೋದ! ಕೋಣೇನೂ ಕತ್ಲೆ. ನಾನೂ ಸುಸ್ತು. ಅಂಗೇ ಬಿದ್ಕೊಂಡು, ಕಣ್ಣು ಬಿಟ್ಟಾಗ ಬೆಳಕರ್ದು ಏಟೋ ಒತ್ತಾಗಿತ್ತು. ಸಾಬಿ ಒಂದ್ಕಡೆ, ಇವಯ್ಯ ಒಂದ್ಕಡೆ ಇನ್ನೂ ಗೊರ್ಕೆ! ಇಬ್ಬರ್ನೂ ಜಿಗ್ಬಿ ಎಬ್ಬಿಸ್ದೆ. ಒಬ್ಬರ್ನೊಬ್ರು ನೋಡಿ ನಕ್ಕ್ವಿ. ಸಾಬಿ "ಅಂಗಾದ್ರೆ ಯಾರೂ ಸಾಯ್ಲಿಲ್ಲ ನಾವು"? ಅಂದ. ಅಟ್ರಲ್ಲೆ ಶೇಕ್ದಾರ್ರು "ಮನೆಯಾತ ಎಲ್ಲಿ?" ಅಂದ್ರು. ನಾನು "ರಾತ್ರೀನೇ ಯಾರೂ ಸರ್ಪಣಿ ಆಡಿಸ್ದಂಗೆ ಕೇಳ್ಬರೂತ್ಲೂ ಎದಕ್ರೋಂಡು ದೀಪಾನೂ ಎತ್ಕೊಂಡು ಕಿತ್ಕೊಂಡ ಆಪಯ್ಯ....ಛತ್ರಕ್ಕೇ!"ಂದೆ. ಶಾಮಣ್ಣೋರು...."ಆಗಾದ್ರೆ.... ಈ ಆಪ್ರಸೇಗೆ ಒಂದ್ರಾತ್ರಿಯಾದ್ರೂ "ಸುಂಕ" ಕೊಡದೆ ಕಳೆದ್ವಲ್ಲ ಅಂದದ್ನಂ ತ್ರೋಷ!" ಅಂದ್ರು. ನಾವೂನೂ ಒಪ್ಪಿ ಎದ್ದು ಇಳಿದು ಬಂದ್ವಿ ಮೆಟ್ಲ ಕೆಳಗೆ. ಕೊನೇಮೆಟ್ಲು ಮೆಟ್ಕೋ ಅಷ್ಟ್ಯತ್ಗೆ ಕಂಬ್ದಂಗೆ ನೆಟ್ಕೊಂಡು ಮೂರ್ಛನಾನೂ ಕಂಡ್ವಿ; ಕೈಲಿದ್ದ....ದೀಪ ಒಂದ್ಕಡೆ ಮುರಿದ್ಬಿದ್ದು ತಾನೂ ಕುತ್ಗೆ ಮುರ್ಕೊಂಡು ಬಿದ್ಕೊಂಡಿದ್ದ ಮನೆಯಾತ್ನ ಯಣಾನಾವ!

ಶೆಟ್ರು- ಅಯ್ಯೋ ಯೇಮಿ....?

ಜೋರಣ್ಣ--ಯೇಮಿಯೇನು ಶೆಟ್ರೇ....ಕೊನೇಗೂ ಆ ಮನೇಗೆ ಸುಂಕ ವಸೂಲಿ ಆಯ್ತು!!

-- --

## ೫

# ಶಾಮಿಯ ಸೇಡು

ಗೋಷ್ಠಿ ಗುಡಿ ಸಮೀಪಿಸ್ತಿದೆ. ಎಕ್ಕಡ ಜೋಡುಗಳ್ನ ಇದುವರಿಗೂ ಮೆಟ್ಟ್ಲ ಮುಂದೆ ಬಿಚ್ಚಿಟ್ಟು ಗುಡಿಯೊಳಕ್ಕೆ ಕಾಲಿಡೋಪದ್ಧತಿ, ಈ ಹೊತ್ತ್ರಟ್ಗೇ ಈ ಪಂಚಪ್ರಾಜ್ಞರಿಗೆ ತಪ್ಪಬೇಕಾಗಿ ಬಂತು.

ಮೆಟ್ಟ್ಲ ಸುತ್ತ ಹತ್ತಡಿವರೆಗೂ ಚೊಕ್ಕಟವಾಗಿ ಗುಡಿಸಿ, ಸಾರಿಸಿ ರಂಗೋಲೆಯಿಟ್ಟು ಕೆಮ್ಮಣ್ಣಿನ ಚೌಕಟ್ಟು ಹಾಕಿದ್ದೇ ಅಲ್ದೆ ಇನ್ನು ಮೆಟ್ಟ್ಲುಗಳ ಅತ್ತಿತ್ತಕಡೆ ರಂಗೋಲೆ, ಇನ್ನು ಹೊಸ್ಲೋ, ಅರಿಸಿನದಲ್ಲಿ ತೊಳೆದು ಪುಷ್ಪದಲ್ಲಿ ರಂಗೋಲೆ ಪದ್ಮ!

ಶೆಟ್ರು—"ಇದೇಮಿ ಇದುವರ್ಕೂ ಪಾಡುಪಡಿ ಉಂಡಿನ ಕಾಳಮ್ಮು ಈಪದ್ದೇಮಿ ವೊಚ್ಚ ಭಾಗ್ಯಮು? ಸಾಬ್ಲು ಇಕ್ಕಡ್ನೇ ಉಂಡಂಡ. ಲೋಪ್ರನ ಪ್ರೋಯಿ ಚೂಸಿ ಚಪ್ತಾ!" ಎನ್ನುತ್ತಾ ಒಳಹೊಕ್ಕು ನುತ್ತಿರುಗಿ "ಬಾಧಕಂ ಲೇದು ರಾಪ್ರೊಚ್ಚನು ಸಾಬ್ಲು. ಮೀರಂತಾನೂ ಅಟ್ಲೆ. ಇಪ್ಪಿಪ್ಟೇ ಯೆಪ್ರೊ ಬೇಡೀಲು ತಾಗಿ ಪ್ರೋಯಿನ ಘಾಟು ಇಂಕ ಉಂದಿ." ಎಲ್ಲರೂ ಒಳಹೊಕ್ಕು ನೋಡುತ್ತಲು....ಒಂದು ಹೊಸ ಅರಳೇಪೇಟೆ ರೌಕೇಕಣವನ್ನು ನಡುವಿಗೆ ಸುತ್ತಿ ಹಣೆಗೆ ಹರಿದ್ರ ಕುಂಕುಮಗಳನ್ನು ಬಳಿದು ಶಾವಂತಿಗೆ ಪುಷ್ಪಿನ ಹಾರ ವೊಂದನ್ನು ಕೊರಳಿಗೆ ಹಾಕಿ ಅಮ್ಮನನ್ನು ಅಲಂಕರಿಸಿದ್ದ ಅದ್ಬುತಾಕಾಕ್ಷಿಯನ್ನು ಕಂಡು ಬೆಚ್ಚಿಬಿದ್ದವರಲ್ಲಿ....

ಖಾನ್ ಸಾಹೇಬ್ರು--ಆಜ್ ಕ್ಯಾ ಕಾಳಮ್ಮ ಬಡಾ ಖಿದರ್ಮೆ ಹೈ! ಪರ್ಸೋಂ ಬಚ್ಚ್ಯೋಂಕೆ ಮೋಫಕ್ ನಂಗಾ ಥೀಸೋ ಅಮ್ಮಾಕು ಕೊಯಿ ಕೀ ಲಂಗ ಪೇಹನಾಕೆ ಫೂಲೋಂಕುಂಕುಂಭಿ ರಖೀಂ! ಆಜ್ ಕ್ಯಾ ಖುಬ್ಬಹೈ ಅಮ್ಮಾಕೆ?....ಹಬ್ಬ ಇದಾದೆ?....

ಶಾಮಣ್ಣ--ಹಬ್ಬವೇನೂ ಇಲ್ಲ ಈ ಹೊತ್ತು. ಯಾರೋ ಪಾಪ ಹೆಂಗ್ಸು ಮಗೂಗೆ ಸಿಡುಬೋ ಗಿಡುಬೋ ಎದ್ದಿರಬಹುದೂ! **ಎಂದೂ** ಮರೆತ ಮಹಾಕಾಳೀ **ಇಂದು** ಜ್ಞಾಪಕ ಬಂದು ಅಲಂಕಾರಮಾಡಿ ಹೋಗಿರಬೇಕು.

ಶೆಟ್ರು---ಕಾದಾಮರಿ! ಸಂಕಟಮು ವೊಚ್ಚೇತಪ್ಪೇ ವೆಂಕಟರಮಣಾ ಅನ್ನೇದಿ ಮೇಮಂತ. ಸಂಸಾರಮುಲೋ ಸಮಸ್ತಮೂ ಸಲೀಸ್ಗ ಸಲ್ಲುತುಂಡೇ ವೆಂಕೂ ದೇವುಡು ಯಾಲ! ಎವ್ವರು ಯಾಲ! ಮನುಷ್ಯುಡು ಜೈಮಾರಿ ವ್ಯೋಯಿನಪ್ಪುಡೇಕಾದ ದೇವುಡುರಾವಲ! ಒಳ್ಳ ಬಾಗುಂಡೇವರ್ಕು ವೈದ್ಯುಡ್ನಿ ಪಿಲಿಪಿಸ್ತಾರಾ! ಯೇಮ್ನಾಬ್ಬ ?

ಗಡFಖಾನ್- ಬರೋಬರ್ ಶೆಟ್ಟೀ ನೀನು ಹೇಳಿದ್ದೇ ಠೀಕ್. ಆದ್ರೆ ವ್ಹೊ ಕ್ಯೊ ದಿಮಾಕ್ ಜೂರತ್ ಗ್ಯೆರತ್ ಗರಸ್ ಇರೋ ಮರದ್‌ಕ್ಯೆಲಿ ಆಗದ್ ಕೆಲ್ಸ....ಪತ್ಥರ್‌ನಲ್ಲಿ ಬನಾಯಿಸ್ದ ಸನಂಕ್ಯೆಲಿ ಅಗ್ತೈತೆ ಕ್ಯಾ? ಕ್ಯಾ ಸಾಮಿ ಆಪ್ ಬೋಲಿಯೆ! ಖುದಾಕೆ ಖುದರತ್ ಹೋನಾಚ್ ಹೋನ! ಅಲ್ಲಾಕೆ ಹುಕ್ಕುಮ್ ಬಗ್ಯೆರ್, ಕುಚ್ ನಹಿ ಕರ್‌ಸಕ್ತಾಯ್ ಆದ್ಮಿ! ತಾಹಂಭೀ ಸಾಮಿ, ಅಂತ್ಸೆ ಪತ್ಥರ್‌ಕೆ ಸನಮ್ಕು ಪೂಜ ಕರ್ನೇಮೆ ಕುಚ್ ಮತ್ಲಬ್ ಹೈಕ್ಯಾ? ಇಲಂ ಹೈ ಕ್ಯಾ? ಇನ್ಸಾಫ್ ಹೈ ಕ್ಯಾ? ಇಮಾನ್ ಹೈ ಕ್ಯಾ....ವೈತೊ ಹೈರಾನ್ ಹೂಂ! ಬಯಿಜ್ಜತ್ಸೆ ನಹಿ ವ್ಹೊ ಪೂಛ್ನೇಕ ಸಾಮಿ, ಆಪ್ಸೆ ಸಮುಜ್ನೇಕೇಲಿಯೇ!

ಭಟ್ರು---ನೀವ್ ಕೇಳೋ ಪ್ರಶ್ನೆ ಸಾಬ್ರೆ ಹೊಸ್ದಲ್ಲ. ಸಾವಿರಾರು ಜನಗ್ಳು ಕೇಳಿದ ಪ್ರಶ್ನೆ. ಅದಕ್ಕೆ ತಕ್ಕ ಉತ್ತರ ಇದೆ! ಆದ್ರೆ ಆ ಕೇಳೋ, ಸಾವಿರ ಜನಗ್ಳ ಸಾವಿರ ಪ್ರಶ್ನೆಗಳ ಸಾವಿರ ರೂಪಗಳಿಗೆ ಸರಿಯಾಗಿ ಉತ್ತರಕ್ಕೂ ಸಾವಿರ ರೂಪಗಳು. ಆದ್ರೆ ಒಟ್ನಲ್ಲಿ ಪ್ರಶ್ನೇನ್ನೂ ಉತ್ತರಾನ್ನೂ ಒಂದೇ ರೂಪಕ್ಕೆ ಇಡಿಸಿಕೊಳ್ಳೋಕೆ ಮುಂಚೆ....ಒಂದು ಅಸ್ತಿಭಾರ ಬೇಕು....ಪ್ರಶ್ನೆ ಕೇಳೋನೂ ಉತ್ತರ ಹೇಳೋನೂ....ಆಸ್ತಿಕರಾಗಿರಬೇಕು.

ಶೆಟ್ರು--ಯೇಮಿ? ಆಸ್ತಿ ಉಂಡವಲ್ನಾ? ಅಯ್ತೆ ಪೇದವಾಳ್ಳ ಗತಿ ಯೇಮಿ? ಮುಂಚೆ ಲೆಕ್ಕಾಚಾರಮುಯ್ಯಾ ನೀದಿ! ಆಸ್ತಿ ಉಂಡೇವಾಳ್ಳು ದಾನ್ನಿ

ಅನುಭವಿಂಚೇ ಗಲಾಟ್ಲೋ ಉಂಡುಗ....ಸ್ಯಾದವಾಳ್ಳ ಗತಿಯೇಮಿ ಅಂಟಿ. ಪೇದವಾಳ್ಳಕೇ ಕದಾ ಪುಟ್ಟೇದಿ ಪರಮಾತ್ಮುಡು ಯುಗಯುಗಾನ್ಲೂ ?

ಭಟ್ರು—ಎಗರಾಡ್ಬೇಡಿ ಶೆಟ್ರೆ. ಶಾಂತಿ ತಗೊಳ್ಳಿ. ಆಸ್ತಿಕರು ಅಂದರೆ ಹಣವಂತರಲ್ಲ. 'ಆಸ್ತಿ' ಅಂದ್ರೆ ...

ಶೆಟ್ರು—ಗೊತ್ತು ಬಾಗೊತ್ತು ಎಮುಕಲು! ಅಯ್ತೆ ಎಮುಕಲು ಎಕ್ಕಡಯ್ಯ ಒಚ್ಚೆ ಇಕ್ಕಡ?

ಶಾಮಣ್ಣ—ಎಮುಕೆಗಳಲ್ರೀ! ಭಟ್ರು ಹೇಳೋದ್ನ ಕೇಳಿ, ಕಿವಿಗೊಟ್ಟು ಕೇಳಿ.

ಭಟ್ರು—'ಆಸ್ತಿ' ಅಂದ್ರೆ ದೇವ್ರೂಂತ ಒಂದು ಪ್ರಾಣಿಯಿದೆ ಅಂತ ನಂಬೋವ್ರೆಲ್ಲಾ ಆಸ್ತಿಕರು! "ನನಗೆ ದುಡ್ಡು ಕಾಸು ಗದ್ದೆ ತೋಟ ಬೇಕಾದಷ್ಟಿವೆ! ನನಗ್ಯಾರಿಂದ್ಲೂ ಏನೂ ಆಗಬೇಕಾದ್ದಿಲ್ಲಾ"ಂತ ಉಬ್ಬಿ! ಐಹಿಕ ನಶ್ವರ..." ಈ ಹೊತ್ತಿದ್ದು, ನಾಳೆ ಐಶ್ವರ್ಯವನ್ನ ಬಿಟ್ಟು ನಾನೋ ನನ್ನ ಬಿಟ್ಟು ಐಶ್ವರ್ಯಾನೋ ಹೋಗ್ಬೇಕಾಗುತ್ತೆ" ಎಂಬೋದ್ನ ತಿಳಿದೇನೂ...ತನ್ನೂ ತನ್ಸುಖಕ್ಕೆ ಒದಗಿರೊ ಐಶ್ವರ್ಯಾನ್ನೂ ಸೃಷ್ಟಿಸಿ ಸುಡೋ ದೇವ್ರು ಒಬ್ನಿದಾನೆ ಅಂಬೋದ್ನ ನಂಬ್ದೇನೂ ಇರೋವ್ರೆಲ್ಲಾ ನಾಸ್ತಿಕರು. ಈಗ "ಅಲ್ಲಾ" ನಲ್ಲಿ ನಂಬಿಕೆಯಿರೋ ಸಾಬರು, ಪರಮಾತ್ಮನಲ್ಲಿ ನಂಬಿರೋ ನಾವು, ಯೆಲ್ಲೂ ಆಸ್ತಿಕರು. ನಾಸ್ತಿಕರ ಮಾತು ನಮಗ್ಯಾಕೆ.

ಸಾಬ್ರು—ಮಾಫ್ ಕರೀಯೆ ನಾವು ಎಲ್ರೂ ಒಂದೇ ಅಲ್ಲ. ನಮ್ಮ ಅಲ್ಲಾಗೂ...ನಿಮ್ಮ ರಾಮು, ಕಿಷ್ಣಾಗೇನೂ ಫರಕ್ ಇದ್ದಾದೆ. ನಮ್ಮ ಅಲ್ಲಾಗೆ ಜಿಸಂ ಇಲ್ಲ. ವೈಯ್ಯಿ ಕಣ್ಣು ಮೂಗು ಇಲ್ಲ, ನಿಮ್ರಾಮು ಕಿಷನ್ಗ ನಾಲ್ಕುಕಾಲು ಎಂಟುತಲೆ ಇಪ್ಪತ್ತು ಕೈ ......ಅಯ್ಸ ಜೇಡೀವಾಲೂಂಕು ಡರ್‍ರಾನೇಕೇಲಿಯೆ.......ಬೊಮ್ಮ್ಯಾಂಕೆ ಹಿಕ್ಮತ್ ..

ಭಟ್ರು—ಅನ್ಯಾಯ ಸಾಬ್ರೆ! ನೀವ್ಹೇಳೋದು ಶುದ್ಧ ಅನ್ಯಾಯ. ನಿಮ್ದೇವರ ಹಾಗೇನೇವೇ ನಮ್ಮ ದೇವ್ರೂವೇ. ಕೈಯಿಲ್ಲ ಕಣ್ಣಿಲ ಕಾಲಿಲ್ಲ ..

ಶೆಟ್ರು....ಅದೆಟ್ಲಯ್ಯಾ? ಸಾಬುಲು ಚೆಪ್ಪೇದಿ ಸರಿಕದಾ. ಬ್ರಹ್ಮಾಣಿಕಿ ನಾಲುಗು ತಲಕಾಯಿಲು ಲೇವಾ? ವಿಷ್ಣುಡಿಕಿ ನಾಲುಗು ಚೆಯ್ಯಿಲು ಕಾದಾ? ರಾವಣುಡಿಕಿ ಪದಿ....ಉಂಡ್ಲಿ; ವಾಡು ರಾಕ್ಷಸುಡು ..... ....ಕುಮಾರುನಿಕಿ.... ಸಾಬ್ಲೂ ಮೀ ಸಹವಾಸಮುಲೋ ಮನದೇವತುಲಪ್ಪೈನ ಮರ್ಯಾದನೇ ಪೋತುಂದಿ....ಕೊಮಾರಸ್ವಾಮಿ ದೇವುಡುಗಾಂಕಿ ಆರು ತಲಕಾಯಿ.. ವದನಮುಲು ಕಾದಾ? ಇದಂತ ಮಮ್ಮಲ್ನಿ ಬೆದರಿಚ್ಚೇದಾನ್ಕೇ ಕಾದಾ.... ಏರ್ಪಾಡಯ್ಯಿಂದಿ?

ಭಟ್ರು—ಅದೇ ಸೂಕ್ಷ್ಮ ಶೆಟ್ರೇ ನಮ್ಮ ಸೂಕ್ಷ್ಮ ಏರ್ಪಾಡೊಂದ್ರಲ್ಲ... ಅದೇ ಅಸ್ತಿಭಾರ ನಮ್ಮ ಮುವ್ವತ್ತಮೂರುಕೋಟಿ ದೇವತೆಗಳಲ್ಲಿ ಒಬ್ಬೊಬ್ಬರಿಗೂ ಮೈಯ್ಯಿ ಕಣ್ಣು ಕಾಲು ಈ ಬಾಬ್ತುಗಳಲ್ಲೂ ಸಿಡುಬಿಗೆ ಕಾಳಿ, ದುಡ್ಡಿಗೆ ಲಕ್ಷ್ಮಿ, ಪ್ಯಾಸು ಮಾಡೋಕೆ ಸರಸ್ವತಿ, ಭಾವಿ ನೀರು ಬತ್ತಿದ್ರೆ ಗಂಗಾಧರ, ಹೀಗೆ ಡಿಪಾರ್ಟ್‌ಮೆಂಟ್ ಡ್ಯೂಟಿ ಹೇರ್ಸಿದ್ದಲ್ಲಾ ಏರ್ಪಾಟು ಆದ್ರೂನೂವೆ... ಈ ಮನುಷ್ಯ ರೂಪ ಧರಿಸಿರೊ ದೇವತೆಗಳಿಗೆ ಮನುಷ್ಯನೇ ಹುಟ್ಟೋಕೆ ಮುಂಚೆ ನೀವು ಹೇಳಿದ ವಿಕಾರ ಆಕಾರಗ್ಳು ಇಲ್ಲ. ದೊಡ್ಡ ದೊಡ್ಡ ಪರ್ವತಗಳ್ನ ಸೃಷ್ಟಿಸಿದ ದೇವ್ರು ಮೈಲುದ್ದ ಕೈಕಾಲು ಇಟ್ಕೊಂಡ್ರ ಧಾಂಡಿಗನೂ ಅಲ್ಲ... ಚೀನಿ ಚಿಗಟಾನ ಸೃಷ್ಟಿಸಿದ ಅದೇ ದೇವ್ರು ಕ್ರಿಮಿನೂ ಅಲ್ಲ. ಮನುಷ್ಯನಿಗೆ ಆಸೆಯುಂಟೋದು ತಜ್ಜನ್ಮ. ತಜ್ಜನ್ಮವೇನೂ-ಅವನ ಜನ್ಮಕ್ಕೇ ಕಾರಣ! ಈ ಆಶೇನ ತೀರಿಸಿದ ಪರಮಾತ್ಮನ್ನ ತನ್ನಿಷ್ಟದ ಪ್ರಕಾರ ತನ್ಮನಸ್ನಲ್ಲಿ ತಾನೆ ನಿರೂಪಿಸ್ಕೊಳ್ತಾನೆ. ವ್ಯಕ್ತಿ ತನಗೆ ಬಣ್ಣ ಬಳಿಯೋಕೋ ಕಲ್ಲು ಕೆತ್ತೋಕೋ ಬಾಯಿಂದ ಹೇಳೋಕೋ ಹಾಡೋಕೋ ತಿಳಿದ ಪ್ರಕಾರ ಒಂದು ಚಿತ್ರ ಒಂದು ಪ್ರತಿಮೆ ಒಂದು ಭಾಷಣ ಒಂದು ಗೀತೆ ಇವುಗಳಿಂದ ಚಿತ್ರಿಸ್ಕೊಳ್ತಾನೆ ತನ್ನ ಧ್ಯೇಯದ ಜ್ಞಾಪಕಕ್ಕೆ. ಸಾಬ್ರು ಅಲ್ಲಾಗೆ ರೂಪವಿಲ್ಲಾಂತ ಎಷ್ಟು ವಾದಿಸಿದ್ರೂ ...ಕಣ್ಮುಚ್ಕೊಂಡು ಅಲ್ಲಾನ ಅವರು ಧ್ಯಾನಿಸಿದ್ರೆ ಮುಖಮೋರೆ ಯಿಲ್ದಿದ್ರೂ....ಒಂದು ದೊಡ್ಡ ಬೆಳಕಿನ ಹಾಗಾದ್ರೂ ಕಂಡೇ ಬರುತ್ತೆ ಅವರು ಮುಚ್ಚಿದ ಕಣ್ಣಿಗೆ. ಆದರೆ ಮಕ್ಕಳು ಬೆದರಿದ್ರೆ 'ಅಪ್ಪಾ!' 'ಅಮ್ಮಾ!'ಂತ ತಂದೆತಾಯಿಗ್ಳ ಹತ್ತಿರ ಓಡಿಬಂದ ಹಾಗಾಗ್ಲೀ ತನ್ಮಗೂಂತ ಆಡಿಸ್ತಿದ್ದ ಗೊಂಬೆ

ಮುರಿದ್ರೆ 'ಅಮ್ಮಾ! ಮುರಿದ ಗೊಂಬೇನ ಸರಿಮಾಡ್ಕೊಡು' ಅಂತ ತಾಯಿ ಹತ್ರ ಓಡ್ಬಂದ ಹಾಗೆ....ಈ ಹೊತ್ತು ಮಗು ಓಡುಬೆದ್ದು ನರಳೋದನ್ನ ನೋಡಿ....'ಅಮ್ಮಾ! ಮಹಾಕಾಳಿ!....ನನಗಿರೋದು ಒಂದು ಕಷ್ಟಸದ ಖಣ ನನ್ನ ಕೈಲಾಗೋ ಅಲಂಕಾರ ಇಷ್ಟೇ. ಇಷ್ಟರಲ್ಲೇ ಸಂತೋಷಪಟ್ಟು ನನ್ನ ಮಗೂನ ಸರಿಮಾಡ್ಕೊಡೂ'ಂತ ಯಾಪ್ಟೆಂಗ್ಸೊ ಈ ಹೊತ್ತಿನಲಂಕಾರ ಅಮ್ಮನಿಗೆ ಮಾಡಿ ನೋಡಿದ್ರಲ್ಲಿ ಅರ್ಥವಿಲ್ಲ, ನ್ಯಾಯವಿಲ್ಲ, ನಾಜ್ರೆ....ಆದ್ರೂ **ನಂಬಿಕೆ** ಯಿದೆ. **ಆಶೆ** ಇದೆ. **ಮಮತೆ** ಇದೆ. ನೀವು ಘ್ಯಾನಿನೂ ಅಲ್ಲಾಗೆ ಕೈಕಾಲಿಲ್ದಿದ್ರೂನೂವೆ....ಆತ ರಪಂ ಅಂತೀರಲ್ಲ, ಆ ಕಸಿಕರ ಮಮತೆ, ಆತ ಇಟ್ಟಿರೊ ನಿಮಗೆ ಕೈಕಾಲಿಫೆ, ಅಲ್ವೇ? ಕಣ್ಣುಗಳು ಇವೇ ಅಲ್ವೇ? ಹೀಗೇ ನಾಜ್ರೇ ತನಗಿಷ್ಟವಿದ್ದ ಪದಾರ್ಥವನ್ನ ತನ್ನಿಷ್ಟದ ಪ್ರಕಾರೇನೇ ರಚಿಸ್ಕೊಳ್ಳೋ ಅಭ್ಯಾಸ ಮನುಷ್ಯನಿಗೆ ತತ್ಸ್ವಭಾವ. ಆದ್ದರಿಂದ ಪ್ರತಿಮೆಗಳು ಬರೀಕಲ್ಲು ಮಣ್ಣಾದ್ರೂನೂವೆ ಅವುಗಳಿಗಿರೋ ಯೋಗ್ಯತೆ ಅವುಗಳ್ನ ಪೂಜೆಮಾಡೊ ಭಕ್ತನ ಯೋಗ್ಯತೇನೇ ಅಲ್ದೆ....ಬರೀ ಕಲ್ಲಿಗೆ ನಮಗಿಲ್ಲದ ಬುದ್ಧೀನೂ, ಶಕ್ತೀನೂ, ಏನೂ ಇಲ್ಲ.

ಶೆಟ್ಟಿ—ಅಂಥ್ತೆ ಯೋಚು. ದೇವ್ರುಂಡ್ಲಾಂತ....ಮೋವೆಲ್ಲೇ ಮೇ ಜೇಗ್ಸೋನಿಂ ದೇವ್ರುಂಡ್ಲಾ, ಏಂ ಬೋರಣ್ಣಾ ಅಂತಾ ವಿನಿ ಊರ್ಕುಂಡಾವೇ?

ಬೋರಣ್ಣ—ಅಲ್ಲ ನಟ್ಟ ಗುಡಿ ಮನಸರೇ ಕಟ್ಟಿದ್ದು. ಯಿಗ್ರಾನೂ ಕಲ್ಲು ಕುಟಿಗ ಕಡೆದದ್ದು. ಆದ್ರೂನೂವೆ....ಕಡೆದ ಕಲ್ಗೊಂಬೇನ, ದೇವ್ರೂಂತ ಅತ್ಕನಗಳ ನಂಬ್ಕೆ ಮೇಲೆ ಇರೋದು ಜೀವಾಳ!

ಶಾಮಣ್ಣ—ಗುಡೀಂತ ಕಟ್ಟಿ ಒಂದು ಪ್ರತಿಮೇನ ಸ್ಥಾಪ್ಸಿ ನಾವಿರಜನ ಸಾವಿರಾರು ವರ್ಷಗಳಿಂದ ಆ ಪ್ರತಿಮೇನ ಪೂಜೆಮಾಡ್ತ ಬರ್ತಿರೋದ್ರು ಸರಿ ತಪ್ಪ ವಾದಿಸ್ತಿದೀರಲ್ಲಾ ನೀವು. ಚಿಕ್ಕದೊಂದು ಚಾಮುಂಡೇಶ್ವರಿ ವಿಗ್ರಹ ಅತ್ಕಡೆ ಯಿತ್ಕಡೆ ಬೆಳ್ಳೀಲಿ ಮಾಡಿದ ಗಣೇಶ ಪಾರ್ವತಿ ಈಶ್ವರ ರಾಮಕೃಷ್ಣರು ಕೆಳಗೆ ಲಕ್ಷ್ಮೀ ಸರಸ್ವತಿ ಇವೆಲ್ಲಕ್ಕೂ ಮೇಲೆ ಇಂಗ್ಲಿಷ್ ಮೋಜ ಹಾಕ್ಕೊಂಡು ಬಣ್ಣದ ಕಾಲ್ಚೀಲ ಬಣ್ಣದ ಷರಟು ಬಣ್ಣದ ಅರ್ಧ ಷರಾಯಿ ತಲೆ ಕ್ರಾಪು

ಬಾಯಲ್ಲಿ ಒಂದು ಸಿಗರೇಟು ಇಟ್ಕಂಡಿರೊ, ಒಬ್ಬ ಈ ಕಾಲದ ಮನುಷ್ಯನ ತಸ್ವೀರ್ನ ನಾನು ಹೇಳಿದ ಪ್ರತಿಮೆಗಳ ಮೇಲೆ ತಗಲುಹಾಕಿ ಹಗಲೂ ರಾತ್ರಿ ಅಲ್ಲೆ ಒಂದೊಂದು ಪುಣ್ಯ ದಿವಸಾನೂ ಮೊದಲು ಆ ತಸ್ಬೀರಿಗೆ ಪೂಜೆ ಮಂಗಳಾರತಿಯಾಗಿ ಆ ಮೇಲೆನೇವೇ ಕೆಳಗಿರೋ ದೇವರುಗಳ್ಗೆ ಮರ್ಯಾದೆ ಈಗನವರ್ಗೂ ಆಗ್ತಿದೆ; ನಮ್ಕೆಂಟ್ರಲ್ಲಿ ಒಬ್ಬರ ಮನೇಲಿ, ಅಂದ್ರೆ ನಂಬೀರ ನೀವುಗ್ಳು ?

ಶೆಟ್ರು—ಯೇಮಿ ? ದೇವುಂಡ್ಲ ಪ್ರತಿಮೆ ಪೆಟ್ಟಿ ದಾನ್ನ್ಲ ಪೈನ ಮೋಜಾ ವೇಸ್ಕೋನಿ ಕ್ರಾಪು ಚೇಸ್ಕೋಸಿನ ಮನುಷ್ಯನಿ ತಸ್ಬೀರಿನಿ ಪೂಜ ಚೇಸೇದಾ ? ಅದೀನೂ ಬ್ರಾಹ್ಮಣುಲು ಇಂಟ್ಲೋನಾ ! ಪಾತಕಮಯ್ಯಾ, ಮಹಾಪಾತಕಮು ; ಕುಲಕುಲಮೇ ಕಾಲಿಪೋವನು. ಇಂಟಾಡಿದಿ ತಾಲಿ ತಾಲೀನೆ ಪೀಕಿಪೋವುನು.

ಶಾಮಣ್ಣ—ಅದೇ ನಂಬ್ಕೆ ಅನ್ನೋದು. ಈ ಮನೆ ಇಂಟಾಡಿದೀ ಅಂದ್ರಲ್ಲಾ ಆಕೆಗೆ ಇಷ್ಟು ದೇವರುಗಳು ಇದ್ರೂವೆ ತಾಲಿ ಕಿತ್ಕೊಳ್ತಿದ್ದ ಅಪಾಯಾನ ತಪ್ಸಿ ಮಾಂಗಲ್ಯ ರಕ್ಷಿಸಿದ ಅವನು, ಅವನ ರೂಪ ವೇಷ ಹೇಗಿದ್ರೂ ನೂವೆ ಸತ್ತ ಸತ್ಯವಾನನ ಪ್ರಾಣಗಳು ತಿರುಗಿ ಕೊಟ್ಟ ಯಮನ ರೂಪ ಎಷ್ಟು ಘೋರವಾಗಿದ್ರೂ ಆತ್ನೇ ತನ್ನ ಸರ್ವಸ್ವಾಂತ ಸಾವಿತ್ರಿ ನಂಬಿದಹಾಗೆ.... ಈಕೇನೂ ಆ ತಸ್ವೀರ್ನಲ್ಲಿ ನಂಬ್ಕೆ ಯಿಟ್ಟಿರೋದು ಆಶ್ಚರ್ಯವೇ ? ತಪ್ಪೆ ? ಯೇನ್ಸಾಬ್ರೆ.

ಖಾನ್‌ಸಾಬ್- ಯೇತೊ ಮೊಹ್ಬತ್‌ಕೀ ಬಾತ್ ಹೈ....ಉಲ್‌ಫತ್ ಕೀ....ಭರವಸ್ ಕೀ ಬಾತ್ ಹೈ....ಹೇಳಿ ಹೇಳಿ....ಕಾನಿ ಹೇಳಿ !

ಶೆಟ್ರು ಕಥನಾ ?.... ಚಪ್ಪಂಡ.... ಯಮಧರ್ಮುಡು ಎಕ್ಕಡ ! ಮೀರು ಚೆಪ್ಪೆ ಕ್ರಾಪ್ ಚೇಸ್ಕೋನಿ ಮೋಜವೇಸ್ಕೊನಿ ಸಿಗರೇಟ್ ಕಾಲ್ಚೇ ಚಿನ್ನೋಡು ತಸ್ಬೀರು ಎಕ್ಕಡ....ವಾಣಿಕಿ ಪೂಜಾಂಟೆ ಯೇಮಿ....ನಾಕೇಮಿ ಮಂದಟ್ಲಾ ಲೇದು ! ಅಯ್ತೇನೂ ಚಪ್ಪಂಡ ! ಕಥ. ಒಕ್ಕೇಮಾಟ ! ನೆನ್ನ ಮೊನ್ನ ಐಕಟ್ಟು ರಕ್ತಂ ಕಾರ್ತ ದಯ್ಯಾಲು ಈ ಕಥಲೋ ಒಚ್ಚೇದೈತೆ .... ನಾಕೇಮಿ ಭಯಂ ಲೇದು....ಅಯ್ತೇನೂ ನನ್ನ ರೆಯ್ಯಿ ಒಕ್ಕ ಕಲಗಂಟನಿ ! ಗೊಂತ

ಕೋಸ್ಕೋನಿ ರಕ್ತಮುಕಾರ್ತು ಗೆಜ್ಜಲು ಕಟ್ಟಿನ ಕಾಳ್ಳೋ ಕುಲುಕ್ತಾ ನಾ ಬಾಡ ಗಿಲ್ಲುಲೊ ಕುಲ್ಕಿ ಆಡ್ತಿ ಸಾಬ್ಲು ಚಸ್ಸಿನ ಗೂಟಪ್ಪಿನ ನಿಲ್ಕ್ಯಾಕನಿ....ಮುದ್ದು ಕದ್ದೂ....ಅನಿ ಪಲ್ಲವಿ ಪಾಡ್ತಾ ಒಕಗೋಸಾಯಿಪೆನಕ "ಧಿಧಿಸಿಧಿ" ಅನಿ ತಾಳಂ ವೇಸ್ತ ಮಾಯಿಂಟಿಕೊಚ್ಚಿ....ನಡು ರಾತ್ರಿಲೊ 'ಓಟ್ಲ್ ಪ್ರಟ್ಟಸ್ಸ್ರು ಅಂಗಡಿನಿಂಚಿ ಪೆಂತ್ಯಾಲು ದೋಸ ಕೊನ್ನಿಂ ಚಟ್ನಿ ಇಪ್ಪೇ ತೆಸ್ಸಿಚ್ಚಿಸ್ತಾನ, ಲೇಕಾಪ್ರೋತೆ ನೀ ಗೊಂತ ಪಿಸುಕುತ್ತಾ?' ಅನಿ ನನ್ನು ದಬಾಯಿಂಚಿನ ಐಕಟ್ಟು ಕಲಲೊ ಚೂಸಿ....ಕಿರ್ಲಿ ಪಾಯಿಂಚಾಡಿದಿ, ಪಾಪಿಷ್ಟೋಡು.... ಬಳ್ಳಾರಿ ಬೋಯಿಲು ಅಂದ್ರೂ ಒಚ್ಚಿನಪಿಪಾಟ್ಕಿ ನಾಕಿ ಗಾಬರಿ ಪ್ರೋಯಿ.... ಇಂಕಮಿಾಟ ಗುಡ್ಲೊ ದಯ್ಯಾಲು ಕಥ ಪಿನ್ರಾದು ಅನಿ ಮನಸು ಗಟ್ಟೇಸ್ಕುಂಟ್ನಿ. ನೇನೇಮಿ ಪಿರಕಿಕಾದು. ಅಯ್ತೇನೂ ನಡುರಾತ್ರಿಲೊ, ರಕ್ತಮು ಕಾರ್ತು ಮುದ್ದೂ ಕದ್ದೂ ಅನಿ ಗೂಟಪ್ಪಿನ ಎಕ್ಕ್ಯಾನಿ ಪೆನಕೊಗ ಪ್ಯೆರಾಗ ಧಿಧಿಸಿಧೀನಿ ತಾಳಮು ವೇಸ್ತ ನಿದ್ರಲೊ ಒಸ್ತ ಒಕ್ಕಾಡಿದಿ....ಯಿನಪ್ಪ ಗುಂಡಿಗ ಉಂಡಿನ ಮೊಗವಾಡುಕೂ....? ಶಾಮಣ್ಣಗಾರು ಈ ಪೂಾ ಕಥಲ್ಕಿ ದಯ್ಯಾಲು ಗಿಯ್ಯಾಲು ಯೇಮುನ... ?

ಶಾಮಣ್ಣ -ಚೆಪ್ರನೀಡಿ ರೆಪ್ರ. ಚೆಪ್ಪ ಪಿರಾಕಿ ಯೇನು ಇಲ್ಲ ನನ್ನಗೇಲಿ ಕೇಳಿ.

## ಶಾಮಣ್ಣನ ಕಥೆ

ಬಹಳ ದಿನದ ಮಾತಲ್ಲ. ಈಗೀಗ ಐದು ವರ್ಷದ ಮಾತು ಕ್ಯಾತ್ಸಂದ್ರ ಅಂತ ಕೇಳಿರಬಹುದು. ತುಮಕೂರು ಡಿಸ್ಟ್ರಿಕ್ಟು. ಅಲ್ಲಿ ಕೊಟ್ಟೆ ನನ್ನ ತಂಗೀನ. ಆಸ್ತಿ ಪಾಸ್ತಿ ತಕ್ಕಮಟ್ಟಿಗೆ ಇದೆ ಅಳಿಯನಿಗೆ. ಒಬ್ಬನೇ ಮಗ ತಂದೆಯಿಲ್ಲ; ತಾಯಿ ಹೆಸರಲ್ಲೇ ತಕ್ಕಮಟ್ಟಿಗೆ ನಗದು ಇಟ್ಟಿದ್ದಳು ಹೋದ ತಂದೆ, ಅಳಿಯನ ಚಿಕ್ಕಂದ್ನಲ್ಲಿ. ಸಂಬಂಧ ಒದಗಿದ್ದು ಬಲು ಅದೃಷ್ಟ ನನಗೂ ನನ್ತಂಗೀಗೂ. ಅಳಿಯ ಪ್ಯಾಮುಟು ಬಣ್ಣ ಗುಣ ಅಚ್ಚುಕಟ್ಟು....ಅಲ್ದೆ ಮಗು ಹಾಗೆ ಸ್ವಭಾವ. ಇನ್ನು ತಾಯಿಾನೋ ಹೆಣ್ಣು ಹೆತ್ತೋಳಲ್ಲ....ಸೊಸೆ ಅಂದ್ರೆ ಪ್ರಾಣ .... ಮದುವೆ ಯಿರಲಿ, ಪ್ರಸ್ತವಿರಲಿ, ಅದಲ್ಲ ಕಥೆ. ತಂಗಿ ಆರು ತಿಂಗಳ

ಗರ್ಭಿಣಿ. ತವರು ಮನೆಗೆ ಪ್ರಸವಕ್ಕೆ ಕರೆತರೋಕೆ ಹೋಗಿದ್ವಿ ನಾನೂ ನಮ್ಮಮ್ಮೂ ಕ್ಯಾತ್ಸಂದ್ರಕ್ಕೆ. ಇಳಿದದಿನ ಸುಬ್ರಾಯನಷಷ್ಠಿ. ಮೊದಲೇ ಹೇಳಿದ್ದೇನೆ ಮನೆಮಠ ಹೊಲ ಗದ್ದೆ ತೋಟ ಮಗನಿಗಿದ್ರೂನೂವೆ....ನನ್ನ ತಂಗಿ ಅತ್ತೀಗೆ ನಗದು ಇಟ್ಟ್ಯೋಗಿದ್ದ ಗಂಡಾಂತ.... ದೇವ್ರುದಿಂಡ್ರು, ವ್ರತ-ನಿಯಮ ಯಾತ್ರೆ ಇತ್ಯಾದಿಗ್ಳಲ್ಲಿ ನಂಬ್ಕೆ ಆ ಚಿನ್ನದಂಥ ಹೆಂಗಸಿಗೆ. "ಮಗನಿಗೆ ಬೇಕಾದಷ್ಟಿದೆ! ನಾನು ಇಡಬೇಕಾದ್ದೇನೂ ಇಲ್ಲ! ಇವಳಿಟ್ಟ ದ್ರವ್ಯಾನ ಸದುಪಯೋಗಮಾಡಿ.... ಇವರ್ನ ಸೇರೋ ಬಗೆ ಹುಡುಕ್ತೇನೆ" ಅಂಬೊ ಅಭಿಪ್ರಾಯಾನ ಮುಂದಿಟ್ಕೊಂಡು ಕಾಶಿವಿಶ್ವೇಶ್ವರನ ದರ್ಶನವಾಯಿತು, ಕಂಚಿ ಕಾಮಾಕ್ಷಿ ದರ್ಶನವಾಯಿತು! ರಾಮೇಶ್ವರದಲ್ಲಿ ರಾಮಪ್ರತಿಷ್ಠಿಸಿದ ಸಹಸ್ರ ಲಿಂಗಕ್ಕೂ ಸಹಸ್ರ ರೂಪಾಯಿಗಳ ಅರ್ಚನೆ ಆಯಿತು. ಅಲ್ದೆ ಮಥುರ, ದ್ವಾರಕ, ಹರಿದ್ವಾರ, ಗಯ ಈ ಬಾಬ್ತುಗಳೂ ಆಯ್ತು. ಇಷ್ಟೆಲ್ಲಾ ಹೊತ್ತು ಚಿನ್ನದಲ್ಲಿ ನಾಗಸರ್ಪ ಮಾಡಿ ಬ್ರಾಹ್ಮಣನಿಗೆ ದಾನ ಮಾಡಿದ್ದಾಯಿತು. ನಾನು ಹೇಳಿದಹಾಗೆ, ನಾನೂ ನಮ್ಮಮ್ಮ ನಮ್ಮ ತಂಗೀನ ಪ್ರಸವಕ್ಕೆ ಕರೆತರೋಕೆ ಹೋದದ್ದು. ಏತನ್ಮಧ್ಯೆ ಇನ್ನೊಂದು ಉಪಕಥೆ. ನನ್ನ ಹೆಸರು ಶಾಮಣ್ಣ. ಮೆಟ್ರಿಕ್‌ಲೇಷನ್‌ವರೆಗೂ ಹೈಸ್ಕೂಲ್ನಲ್ಲಿ ಓದುತ್ತಿದ್ದ ನಾನು ತಂದೆ ಕಣ್ಣು ಮುಚ್ಕೊಟ್ಮೇಲೆ ಸ್ಕೂಲುಬಿಟ್ಟು ನನ್ನ ಜೀವನೋಪಾಯಾನ ನೋಡ್ಕೊಳ್ಳೋಕೆ ಹಳ್ಳಿಗೆ ಹಿಂತಿರುಗಿ ಬಂದೆ. ಸ್ಕೂಲಿನಲ್ಲಿದ್ದಾಗ ನನ್ನ ಹೆಸರು ಟಿ. ಎ. ಶಾಮಣ್ಣ. ಟಿ. ತಾವರೆಕೆರೆ, ಎ. ನಮ್ಮ ತಂದೆ ಹೆಸ್ರು ಅಶ್ವತ್ಥ. ಸ್ಕೂಲಿನಲ್ಲಿ ನನ್ನ ಪಕ್ಕದಲ್ಲಿ ಇನ್ನೊಬ್ಬ ಶಾಮಣ್ಣ. ಅವನೂ ಟಿ. ನೆ ತರೀಕೆರೆ, ಮಲ್ನಾಡುಕಡೆ. ಭಾಗ್ಯವಂತರ ಹುಡುಗ; ಕಾಫಿ ಎಸ್ಟೇಟು ಇತ್ಯಾದಿ. ಬಿ.ಎ. ನೂ ಪ್ಯಾಸ್ ಮಾಡಿ ಅಗ್ರಿಕಲ್ಚರ್ ಅಂತಾರಲ್ಲ ವ್ಯವಸಾಯದ ಇಲಾಖೆ, ಆ ಬಾಬತ್‌ನಲ್ಲಿ ಕೆಲ್ಸ ಕಲ್ತ್ಕೊಂಡು ತಿರುಗಿ ಹಳ್ಳಿಗೆ ಒಂದು ಧಾನ್ಯ ಸಸ್ಯಾದಿಗ್ಳು ಕಾಫಿ ಉತ್ಪತ್ತಿ ಇತ್ಯಾದಿಗ್ಳು ತನಗೂ ತನ್ನ ಸುತ್ತಮುತ್ತ ಇರುವವರಿಗೂ ಒಂದಕ್ಕೆರಡು ಉತ್ಪತ್ತಿ ಮಾಡಿಸ್ತಾ ಇದಾನೆ. ಈಗ ತಹಲ್‌ವರಿಗೂ ಸ್ಕೂಲಿನಲ್ಲಿ ಇಬ್ರೂ ಶಾಮಿ, ಇಬ್ರೂ ಹತ್ತತ್ರಲೇ ಕೂತ್ಕೊಳ್ಳೋದು, ಅಲ್ದೆ ಭಾಗ್ಯವಂತನ ಬಡಾಯಿ ಅವನಿಗಿಲ್ಲ. ಒಡತನದ ಬೆದರಿಕೆ ನನಗಿಲ್ಲ ಹೀಗೋಹಾಗೋ ನಮ್ಮಿಬ್ರಿಗೂ ಅದು ಹೇಳೋಕೆ ಅಸಾಧ್ಯ.... ಅನ್ಯೋನ್ಯ, ಸ್ನೇಹ ಅಂತ

ಅಂತೇವೇ ಹೊರ್ತು ಇವೆಲ್ಲಾನ್ನೂ ಮೀರಿಸಿದ ಒಂದು ಬಾಂಧವ್ಯ ನಮಗೆ. ಕಥೆ ಯಾಕೆ ಬೆಳಸಬೇಕು. ಮೆಟ್ರಿಕ್‌ಲೇರ್ಷ ಮುಂಚೇನೇವೇ ಮನೇ ಬಂದು ಸೇರಿದೆ ನಾನು. ಶಾಮಿನೊ ಹಾಸನದಿಂದ ಬೆಂಗಳೂರು, ಬೆಂಗಳೂರಿಂದ ಮದರಾಸು. ಅಲ್ಲಿ ಬಿ.ಎ. ಆಗುತ್ಲೂ ಯಥಾಸ್ಥಾನಂ ಪುನಃ ಬೆಂಗಳೂರು, ಹೆಬ್ಬಾಳ. ಆಮೇಲೆ ತನ್ನೂರು ತರೀಕೆರೆ. ಅವನಾಯಿತು ಅವನ ಕಾಫಿ ಎಸ್ಟೇಟು ಆಯಿತು. ಆದ್ರೂನೂವೇ ನೋಡಿ! ಅನ್ಯೋನ್ಯ ಸ್ನೇಹ ಇವುಗಳ್ನ ಮೀರಿಸಿಷ್ಟೇ ಬಾಂಧವ್ಯ, ನಮ್ಮ ಬಾಲ್ಯಸ್ನೇಹಕ್ಕೆ ಸೂಚನೆ ಹೇಳ್ತೀನಿ. ಆಗಿಂದ ತಿಂಗಳು ತಿಂಗಳೂ ಬಿಡದೆ ಕಾಗದಗಳು ಬದಲಾಯಿಸ್ಕೊಕ್ತಾ ಈಗಿನವರಿಗೂ ಬೆಳೆಸ್ತಿದೇವೆ. ಆದ್ರೆ ಈಗ ಹೇಳೋ ಕಥೆ ಈಗಿಂದೀಚಿನದು. ಕ್ಯಾತ್ಸಂದ್ರದಲ್ಲಿ ನಾನೂ ನಮ್ಮಮ್ಮನೂ ಆರು ತಿಂಗಳು ಗರ್ಭಿಣಿಯಾದ ನನ್ನ ತಂಗೀನ ಪ್ರಸವಕ್ಕೆ ಕರೆತರೋಕೆ ಹೋದದ್ದು ಸುಬ್ರಾಯನಷಷ್ಠೀ ದಿನ, ಅಂತಲ್ಲೇ ಪ್ರಾರಂಭಿಸಿದ್ದು ನನ್ನ ಕಥೆ?

ತಕ್ಕಮಟ್ಟಿಗೆ ದೊಡ್ಡ ಹಳ್ಳಿ ಕ್ಯಾತ್ಸಂದ್ರ. ಬೀಗ್ತಿಮನೆ ಊರಿಗೆಲ್ಲಾ ದೊಡ್ಡದು. ಅವತ್ತಿನ ಖರ್ಚು.... ಪೂಜೆ ಪುನಸ್ಕಾರ ಗೋದಾನ ಭೂರಿ ಸಂತರ್ಪಣೆ ಅಲ್ದೆ ಈ ಗಾಂಧಿ ಮಹಾತ್ಮರ ಗಲಾಟೇಲಿ ಹೊಲಗೇರಿ ಮಾದಿಗ ಕೇರಿ ಇಲ್ಲೆಲ್ಲಾ ಊಟ, ಅಲ್ದೆ ಊರ ಗುಡೀಲಿ ಅಭಿಷೇಕ, ಸಹಸ್ರಾರ್ಚನೆ, ಏತನ್ಮಧ್ಯೆ ಮನೇ ಪುರೋಹಿತನಿಗೆ ಸುಬ್ರಾಯನ ಸ್ವರ್ಣಪ್ರತಿಮೆ ದಾನ.... ಅಲ್ದೆ ಮುತ್ತೈದೆಯರಿಗೆ ಕಿಂಗೆ ಕಣ ದಾನಗ್ಳು, ನಮ್ಮ ತಾಯಿಗೆ ನಾರ್ಮಡಿ, ನನಗೆ ಜರ್ತಾರಿ ಅಂಚು ಧೋತ್ರ, ಹಲ್ಲ.... ಯಾಕೆ ಹೇಳ್ತೀನಿ ಅಂದ್ರೆ ಎ ಸಹಸ್ರ ಸ್ಪೀತಗಳಾದ್ರೂ ಸಹಿಷ್ಟಿರ್ಬೇಕು ಆ ಮುದುಕಿ ಕೈಯಿಂದ ಖರ್ಚ. ನಾನು ಹೇಳೋ ಕಥ ದಿನವೆಲ್ಲಾ ಆದ ಗಲಾಟೆ ವರ್ಣನೆ ಅಲ್ಲಾ; ಆ ದಿನ ರಾತ್ರಿ ಒಂಭತ್ತು ಘಂಟೆ ಸರಾಸರಿ ಪ್ರಾರಂಭವಾದದ್ದು.... ನಿಮ್ನಿಮ್ಮಲ್ಲಿ ಪೂಜೆಯ ತಪ್ಪು ನೆಪ್ಪು ವಾದದ ಮಧ್ಯ ನಾನು ನುಗ್ಗಿ ಹೇಳಿದ ತಪ್ಪೀದಿನ ಪೂಜೆಯ ಕಥೆಯ ಪ್ರಕರಣ. ಹೇಳಿದ ಹಾಗೆ ಒಂಭತ್ತು ಘಂಟೆ ಸರಾಸರಿ. ಗಂಡಸರಿಗೆಲ್ಲಾ ಊಟ ಆಗ್ಹೋಗಿತ್ತು. ಮುಂದಿನ ಕೋಣೇಲಿ.... ಎಲೆಯೆಲ್ಲಾ ಎತ್ತಿಹಾಕಿ ಗೋಮ ಹಚ್ಚಿ ಕೈ ತೊಳಕೊಂಡು ಆಗ್ತಾನೆ ಹೆಂಗಸ್ರು.... ಪರಿಚಾರಕರಿಲ್ಲ, ಮನೆ, ಮನೇವ್ರು, ನೆಂಟ್ರು, ನೆರಹೊರೇವ್ರು.... ಹೆಂಗಸ್ರೇ ಕೆಲ್ಸ; ಹೇಳಿದ

ಹಾಗೆ, ಗಂಡಸ್ರೂಟದ ಗಲಾಟೆಯೆಲ್ಲಾ ತೀರಿ ಆಗ್ತಾನೆ ತಮ್ಮ ಊಟಗಳ್ಗೆ ಏರ್ಪಾಡು ಹಿಂದಿನ ಅಂಗಳದಲ್ಲಿ ಮಾಡ್ತೀರೋ ಗಜಗುಜಿ. ಮಾವ ಅಂದ್ರೆ ನಾನು, ಅಳಿಯ, ಆತನ ಸೋದರಮಾವ, ಇನ್ನಿಬ್ಬರು ಮೂವರು ನೆಂಟ್ರು, ಜಗಲಿಗೆ ಬಂದು ಕೂತು ತಾಂಬೂಲ ಅಗೀತಿಧೇವೆ. ಕಗ್ಗತ್ತೆಲ್ಲ. ಗುಡಿ ಶಿಖರದ ಮೇಲಿನ ಲಾಂದ್ರದ ಬೆಳಕು ಇದ್ದ ಕತ್ತ್ಲೇನ ಇನ್ನೂ ಕಪ್ಪಾಗಿ ತಿದ್ದ್‌ತಿದೆ. ಜಗಲಿ ಗೋಡೆ ಗೂಡ್ನಲ್ಲಿ ಇಟ್ಟಿದ್ದ ಒಂದು ಹಣತೇ ಬೆಳಕಿನಲ್ಲೇ ನಮ್ಮ ನಮ್ಮ ಸಂಭಾಷಣೆ. ಮೊದಲು ಮಾತು ಎತ್ತಿದ್ದು ಪುರೋಹಿತರು; ಸುಬ್ರಾಯ್ನ ಷಷ್ಠಿ ವ್ರತಾ ಹೇಳಿ ಬಾಗಿನದನಮೇತ ಹೊರಟುಹೋದ ಕಥೆ. ಆಮೇಲೆ ಮಾತಿನ ಮೇಲೆ ಮಾತು ಬಂದು, ಕಂಡ ಹಾವೂ, ಕಾಣದ ಹಾವೂ, ಕಡಿದ ಹಾವೂ, ಕಡಿಯದ ಹಾವೂ, ಮಲಯಾಳೀ ಮಂತ್ರ, ಬೇವಿನ ಸೊಪ್ಪು ಬೀಸಿ ವಿಷ ಇಳಿಸೋದು, ಹೀಗೆಲ್ಲ ಹಾವುಗಳ ಕಥೇಗೆ ಪ್ರಾರಂಭ. ಏತನ್ಮಧ್ಯೆ ಒಬ್ಬ ಹುಡುಗ, ಬಲು ಚಟುವಟಿಕೆ, ದೂರದ ಸಂಬಂಧ ಅಳಿಯನಿಗೆ; ಹೇಳಿದ—ಅವರ ಇಸ್ಕೂಲ್‌ನಲ್ಲಿ ಎರಡು ಮೂರು ದಿನಕ್ಕೆ ಹಿಂದೆ ಕ್ಲಾಸುಗ್ಳು ಜರಿಗ್ತಿರೊ ವಾಗ್ಲೇನೇವೇ ಒಂದು ನಾಗರ ಹಾವು ಕಂಡ್ಬಂದು ಹುಡುಗರೆಲ್ಲ ಚೆದರಿ, ಎದುರು ಬಂಗ್ಲೇಲಿದ್ದ ಮಿಷನರಿ ದೊರೆ ಬಂದೂಕ್ ಸಮೇತ ಬಂದು ಆ ಹಾವ್ನ ಕೊಂದ ಅನ್ನುತ್ಲಾವೆ.... 'ಶಾಂತಂ ಪಾಪಂ! ಶಾಂತಂ ಪಾಪಂ! ಕೃಷ್ಣಕೃಷ್ಣ!' ಅಂದ ನಮ್ಮ ಅಳಿಯನ ಸೋದರಮಾವ. 'ಯಾಕ್ರೀ' ಅಂದದ್ದಕ್ಕೆ.... 'ಹಾವಾಗ್ಲೀ ಹಸುವುಗುವಾಗ್ಲೀ.... ಹಿಂಸೇ ಹಿಂಸೇನೆ' ಅಂದ ಆತ. ನನಗೆ ಶಾಮಿ ಜ್ಞಾಪಕ ಬಂತು. ಪಕಪಕನೆ ನಕ್ಕೆ. 'ಇದೇನ್ನಗೂ'ಂತ ಕೇಳಿದ್ದಕ್ಕೆ ನಾನ್ಹೇಳಿದ್ದು: "ಹಿಂಸೆ ಅಂದ್ರಲ್ಲಾ, ಹಾವಿರಬೇಕಾದ್ದು ಅವರ ಹುತ್ತದಲ್ಲಿ. ತಿಳುವಳಿಕೆ ಅದಕ್ಕಿಲ್ಲದ ಪಕ್ಷಕ್ಕೆ ಹುತ್ತ ಬಿಟ್ಟು ಹೊರಕ್ಬಂದು ನತ್ತುನೂರು ಹುಡುಗ್ರು ಓಡಾಡೋ ಸ್ಕೂಲಿಗೆ ಬಂದು ವಿಷದ ಹಲ್ಲು ಇಟ್ಕೊಂಡು ಹೆದರ್ಸೋ ಪ್ರಾಣೇನ ಕೊಲ್ಲೋದು ಹಿಂಸೆ ಅಲ್ಲ. ಆದ್ರೆ ಅದರ ಜನ್ಮಕ್ಕೂ ಮೋಕ್ಷ. ಹುಡುಗರ ಹೆದರಿಕೇಗೂ ಮೋಕ್ಷ ಪಾಪ ಎಲ್ಲೀದೂ?" ಅಂದದ್ದಲ್ದೆ "ಆ ಮಿಷನರಿ ದೊರೆಯೇನೊ ಬಂದೂಕಿನಿಂದ ನೋವಿಲ್ದೆ ಒಂದೇ ಗುಂಡಿನಲ್ಲಿ ಕೊಂದ ಆ ಹಾವ್ನ! ನಮ್ಮ ಶಾಮಿಾಗಾನ ಇದ್ದಿದ್ದಿದ್ರೆ ಆ ಹಾವ್ನ ಹೇಗಾದ್ರು ಜೀವಸಮೇತ ಹಿಡ್ದು ನರನರ ಕಿತ್ತು ಕೊನೇಗೂ ಕೊಲ್ಲೋಕೆ ಹಿಂಜರಿದು

ಕೊಳ್ತಿದ್ದ. ಮುಖ್ಯ ನಮ್ಮ ಶಾಮಿಗೆ ನಾಗರಹಾವಿನ ಮೇಲಿರೋ ಸೇಡು ಈ ಮಿಷನರಿ ಸಾಬ್‌ಗೆ ಇಲ್ಲದಿದ್ದದ್ದು ಆ ಹಾವಿನ ಪುಣ್ಯ" ಂತ ಹೇಳಿ ನಮ್ಮ ಶಾಮಿ ಚರಿತ್ರೆ ಹೇಳೋಕೆ ಪ್ರಾರಂಭಿಸ್ತಿದ್ದೆ. ಅಷ್ಟರಲ್ಲೆ ಆಳಿಯ ದಿನವೆಲ್ಲಾ ಓಡಾಡಿ ದಣಿದು ಹೊಟ್ಟೆ ತುಂಬಾನು ತಿಂದು.... ಆಕಳಿಸೋ ಬಾಯಿಗೆ "ರಾಘವಾ! ರಾಘವಾ!" ಂತ ಚಿಟಿಕೆಗಳು ಒಪ್ಪಿಸ್ತ.... ನೀವೆಲ್ಲ ಮಾತಾಡ್ಕೊಳ್ತಿರಿ, ನನಗೆ ನಿದ್ದೆಬರುತ್ತೆ, ಹೋಗಿ ಬಿದ್ಕೋತೇನೆ" ಅನ್ಕೊಂಡು ಒಳಕ್ಕೆ ಹೋದ. ನಾನೂ ಹಾವಿನ್ಮೇಲೆ ಸೇಡಿಟ್ಟಿರೋ ನಮ್ಮ ಶಾಮಿ ಯಾರು, ಏನು, ಎತ್ತ, ಅಂಬೋದ್ನೆಲ್ಲಾ ವಿವರಿಸ್ತಿದ್ದೇನೆ. ನಿಶ್ಶಬ್ದವಾಗಿ ತಿರಿಗಿ ತೆರಿಯ್ತು ಅಳಿಯ ಆಗ್ಲಾನೆ ಮುಚ್ಕೊಂಡ್ಹೋಗಿದ್ದ ಬೀದೀ ಬಾಗಿಲು! ತಿರುಗ್ತೇನೆ! ನನ್ನ ತಂಗಿ ಬಾಯ್ಬಿಡ್ದೇನೆ ಬಲಗೈಯ್ಯಿಂದ ಬಾ, ಬಾಂತ ಸೌಂಜ್ಞೆ ಮಾಡ್ತಿದಾಳೆ. ಅರ್ಥವಾಗದೆ ಜಗಲೀಲಿದ್ದೋರಿಗೆ "ಬಂದೆ" ಂತ ಹೇಳಿ ಜಗಲಿ ಇಳಿದು ತೆಗೆದ ಬಾಗಿಲು ಹಾಸಿ ಒಳಗೆ ಹೋದ್ನೋ ಇಲ್ವೊ.... ನನ್ತಂಗಿ ಕುತ್ಗೇನ ಎರಡು ತೋಳುಗಳಿಂದ ಬಿಗಿದು, ಮುಖಾನ ನನ್ನೆದೇಮೇಲಿಟ್ಟು "ಅಣ್ಣಾ! ಬಂತಲ್ಲಾ ಕೇಡು ನನ್ನ ತಾಳೀಗೆ ಇನ್ನೇನ್ಗತಿ!" ಅನ್ನುತ್ತ ತನ್ನ ಭಾರಾನೆಲ್ಲಾ ನನ್ನಮೇಲೆ ಹಾಕಿ ಗೋಳಾಡ್ತಿದಾಳೆ! ಒಂದೂ ಅರ್ಥವಾಗಲಿಲ್ಲ ನನಗೆ ವೈಗೇನಾದ್ರು ಬಂದ್ರೆ.... ತಾಳೀಗಪಾಯ ಎಲ್ಲೀದು? ಒಂದೂ ತೋಚಲಿಲ್ಲ. ಮೆಲ್ಲಗೆ ಅವಳ ತಲೆ ಸವರ್‍ತ "ಇದೇನ್ಕೆಂಚು".... ಅನ್ನತ್ಲು "ಮೆಲ್ಲಗಣ್ಣ ಮೆಲ್ಲಗೆ ಮಾತಾಡು ನಿನ್ನ ಧ್ವನಿಗಾನ ಎತ್ತಿದ್ಯೋ.... ನಾನು ಕೆಟ್ಟಹಾಗೆ!" ಎಂದು ಅಂದು ನನ್ನ ಎಳಕೊಂಡುಹೋಗಿ.... ಮೊದ್ಲೇ ಹೇಳಿದ್ನಲ್ಲಾ ಮುಂದಿನ್ಕೋಣೆ ಗಂಡಸ್ರು ಊಟಮಾಡಿದ್ದು .... ಅಂತ ಅದ್ರಪಕ್ಕದಲ್ಲಿ ಒಂದು ಕೋಣೆ: ಅಲ್ಲಿಯೇ ನನ್ನ ತಂಗಿ ಮೆಲ್ಲಗೆ ಎಳಕೊಂಡು ಹೋಗಿ ಹೊಸಲಿಂದ ಹತ್ತ್ಯಜ್ಜೆ ಈಚೇನೆ ನಿಲ್ಲಿಸಿ "ಅಲ್ನೋಡಣ್ಣಾ! ಇನ್ನೇನ್ಗತಿ! ನನ್ನ ಗತಿ! ನನ್ನ ತಾಳಿ ಗತಿ! ನನ್ನ ಹೊಟ್ಟೇಲಿರೊ ಮಗುವಿನ ಗತಿ!" ಅಂತ ಬಿಕ್ಕಿ ಬಿಕ್ಕಿ ಬರುವ ಅಳುವನ್ನು ನುಂಗುತ್ತಾ ಎರಡು ತೋಳಿಂದ್ಲೂ ನನ್ನ ಕುತ್ಗೇನ ಬಿಮ್ಮನೆ ಬಿಗಿದು ನನ್ಮೇಲೆ ಬಿದ್ಕೊಂಡ ನನ್ತಂಗೀನ ಎಡಗೈಯಿಂದ ಹಿಡಕೊಂಡು ತಿರುಗ್ತೇನೆ ಅವಳು ತೋರಿಸಿದಕಡೆ ನೋಡೋಕೆ, ನನಗೀಗ್ಲೂ ಆಶ್ಚರ್ಯ! ನಾನು ಆಗ ನೋಡಿದ್ನ ನೋಡುತ್ಲೂವೆ ನನ್ನ ಮೇಲೆ ಒರಕ್ಕೊಂಡಿದ್ದ ತಂಗಿ

ಸಮೇತ ನಾನು ಹೇಗೆ ಮೂರ್ಛೆ ಬೀಳ್ದೆ ನೆಟ್ಕೊಂಡು ನಿಂತಿದ್ದೇಂಬೋದು ಈಗ್ಲೂ ನನಗಾಶ್ಚರ್ಯ! ಕೋಣೆ ಕತ್ಲೇಂತ್ಲೇ ಹೇಳ್ಬೇಕು! ಇರೋ ಬೆಳ್ಕು ಪುಟ್ಟದೊಂದು ನೀರಾಂಜನ. ಎದರು ಗೋಡೇಲಿ ಚಿನ್ನದ ಚಿಕ್ಕದೊಂದು ಚಾಮುಂಡಿ ಅಕ್ಕಪಕ್ಕದಲ್ಲಿ ರಾಮ, ಕೃಷ್ಣ, ಪಾರ್ವತಿ ಪರಮೇಶ್ವರರು, ಕೆಳಗೆ ಸರಸ್ವತಿ ಲಕ್ಷ್ಮಿ, ಎಲ್ಲಾ ಬೆಳ್ಳಿ! ಫಳಫಳಾಂತ ಪ್ರಜ್ವಲಿಸ್ತಿವೆ! ಇವುಗಳ ಕಡೆ ಅರ್ಧ ಕತ್ಲೇಲಿ ಬಿದ್ಕೊಂಡಿದಾನೆ, ಅಳಿಯ. ನಿದ್ದೆ, ಸ್ವಲ್ಪ ಗೊರಕೆ. ಇವನ್ತ ಲೇಗೂ ಪ್ರತಿಮೆಗಳು ಹಾಕಿರೋ ಗೋಡೆಗೂ ಒಂದಡಿ ಕೂಡ ಇಲ್ಲ. ಆ ಒಂದಡೀಲೆಯಾದ್ರು ಎತ್ಕೊಂಡು ಹೆಡೇನ ಒಂದ್ಸರೀ ನಾಗ್ರಹಾವು ಹಿಂದಿರೊ ಗೋಡೇಗೂ ಮುಂದಿರೊ ಅಳಿಯನ ಮುಖಕ್ಕೂ ಆಡಿಸ್ತಿದೆ. ಅದ್ರ ಕಣ್ಣುಗ್ಳು ಆ ಒಂದು ನೀರಾಂಜನದ ಬೆಳಕ್ನಲ್ಲಿ.... ಚಾಮುಂಡಿ ಚಿನ್ನದ ಪ್ರತಿಮೇಗಿನ್ನ ಜಾಸ್ತಿ ಜ್ವಾಲೆ ಕಾರ್ತಿದೆ! ನನ್ಗತಿಯೇನು! ಹೆಣದ್ಹಾಗೆ ನನ್ಮೇಲೆ ಒರಗ್ಕೊಂಡಿರೋ ನನ್ನ ತಂಗಿ ಗತಿಯೇನು! ಹೆಡೆ ತೂಗ್ತ ಇರೋ ಆ ನಾಗರಹಾವ್ಗೆ ಮುಖ ಬಿಚ್ಕೊಂಡು ಒಂದೂ ತಿಳಿಯದೆ ಮಗುವಿನ ಹಾಗೆ ನಿದ್ದೆ ಮಾಡ್ತಿದ್ದ ಅಳಿಯನ ಗತಿಯೇನು? ಯಾವ ದೇವರ್ನ ಕೂಗೋದು? ದೇವ್ರುಗ್ಳೆಲ್ಲಾ ಚಿನ್ನದಲ್ಲೂ ಬೆಳ್ಳೀಲೂ ಅಲ್ಲೇ ಇದಾರೆ.... ಆ ಹಾವಿನ ಪಕ್ಕದಲ್ಲೇ! ಜಗಲೀಲೋ ಮಾತುಗಳ ಗಲಾಟೆ. ಹಿಂದಿನ ಹಜಾರ ಹೆಂಗಸ್ರ ಗಜಗುಜಿ. ಇಲ್ಲೋ ನಾನು ನನ್ತಂಗಿ. ನಮ್ಮಿದ್ರುಗೆ ಕೋಣೇಲಿ ಹೆಡೆಬೀಸ್ತಿರೋ ನಾಗಸರ್ಪ, ಅಳಿಯ. ಒಂದೂ ತೋಚ್ದೆ ನನ್ನ ಬೆದರ್ಕೇಲಿ.... ಆ ಹಾಳು ನೋಟಾನೂ ನೋಡ್ಲಾರ್ದೆ ಕಣ್ಣು ಮುಚ್ಕೊಂಡು ನನ್ನ ತಂಗೀನ ತಬ್ಕೊಂಡೆ. ಎಷ್ಟು ನಿಮಿಷಗಳು, ಎಷ್ಟು ಘಳಿಗೆಗಳು, ಇಲ್ಲ ಎಷ್ಟು ವರುಷಗಳು ಹಾಗೆ ನಿಂತಿದ್ದೆವೋ ನಾನೂ ನನ್ನ ತಂಗೀನೂ, ಈಗ್ಲೂ ನನಗ್ಗೊತ್ತಿಲ್ಲ. ಒಂದು ಬೆಲ್ಲು ಅಲ್ದೆ "ಶಾಮಾ" ಶಾಮಾಂತ ನನ್ಹೆಸ್ರು ಬೀದಿಯಿಂದ ಯಾರ್ದೋ ಕೂಗು ಕೇಳ್ಸಿಂದು ಬಿಚ್ತೇನೆ ನನ್ಕಣ್ಣು, ಅದೇ ಸೀನು ಎದ್ರುಗೆ! ಅದೇ ಕೋಣೆ. ಅದೇ ನೀರಾಂಜನದ ಬೆಳಕ್ನಲ್ಲಿ. ಅದೇ ಚಿನ್ನ ಬೆಳ್ಳಿ ಪ್ರತಿಮೆಗಳು, ಅದೇ ಹೆಡೆಯೆತ್ತಿದ ಸರ್ಪ, ಅದೇ ಅಳಿಯನ್ಮುಖ. ಆದ್ರೊಂದು ವ್ಯತ್ಯಾಸ. ಬೀದಿಯಿಂದ ಬೈಸ್ಕಲ್ ಘಂಟೆ ಬಾರಿಸ್ತ "ಶಾಮಾ ಶಾಮಾಂತ ಕಿರುಲ್ತಿರೋ ಧ್ವನಿ ಶಮ್ಮಾಮಿಾದು".... ಅಂತ ತಿಳಿಯುತ್ಲೂವೆ.... ಈ ಎದ್ರು ಕೋಣೇನೇ

ಮತ್ತೂ ಕೆಂಚೂನ ಅರ್ಧ ಎಳ್ಕೊಂಡು ಅರ್ಧ ಎತ್ಕೊಂಡು ಬೀದಿ ಬಾಕಿಲು ಹೊಸಲು ಸೇರಿ " ಶಾಮೀ! ಶಾಮೀ! ಇಲ್ಲೇ ಇಧೇನೆ ಮೆಲ್ಲಗೆ ಬಾ! ಬೇಗ ಬಾ!" ಅಂದ ಜ್ಞಾಪಕ. ಅವನು ಈ ಕತ್ಲೇಲಿ ಒಂದು ಎಲೆಕ್ಟ್ರಿಕ್ ಟಾರ್ಚಿನ ಬೆಳಕನ್ನ ಬಾಕಲಿಗೆ ತಿರುಗಿಸಿ ನನ್ನ ಮುಖದಲ್ಲಿ ಕಂಡ ಹೆದರಿಕೇನೂ ನನ್ನ ಮೇಲೆ ಮೂರ್ಛೆ ಬಿದ್ದು ಒರಗಿದ್ದ ನನ್ನ ತಂಗೀನ್ನೂ ನೋಡಿ ನೆಟ್ಟಗೆ ಬಂದು "ಏನು ಶಾಮೀ ಇದು?" ಅಂದದ್ದು ಜ್ಞಾಪಕ. "ನಿಶ್ಶಬ್ದವಾಗಿ ಒಳಗ್ಬಾ" ಅಂದು ಅವನ ಕೈಹಿಡ್ಕೊಂಡು ಒಳಗೆ ಕರೆದೆ. ಕೋಣೇಲಿ ಇರೋ ಸ್ಥಿತಿ ತೋರಿಸಿ.... 'ನಮ್ಮಳಿಯ ಶಾಮಿ!' ಅನ್ನುತ್ತೀವೆ.... ಅದೇನು ಗಂಡ್ಸ! ಒಂದು ಕ್ಷಣದಲ್ಲಿ ತಿಳುಕೊಂಡ ಸನ್ನಿವೇಶದ ಜೀವಾಳಾನ. ಟಾರ್ಚ್ನ ಆರಿಸ್ದ. ಹಿಂದಿನ ಬಾಕಿಲು ತೆಗೆದು "ನಿನ್ನ ತಂಗೀನ ಹೆಂಗಸ್ರ ಹತ್ತಿರ ಒಪ್ಸಿ .... ಹೇಳೇ ಬಿಡು. 'ಹಾವು'! ನೀವೇನಾದ್ರೂ ಗಲಾಟೆ ಮಾಡ್ದೆ ಇದ್ರೇ ಅಪಾಯವೇನೂ ಇಲ್ಲ. ನಿಮ್ಮಗಳ ಕಿರ್ಲಾಟ ಕೇಳಿ ಹಾವು ರೇಗಿತೋ ಗಂಡಸ ರಿಗೆ ಹಾನಿ, ಅಂಜೋದ್ನ ಹೇಳ್ಬಿಟ್ಟು ಬೇಗ ಬಾ!" ಅಂದ. ಇವನು ಹೇಳ್ದ್ನ ಬೇಗ್ತಿಗೆ ಹೇಳಿ ತಂಗೀನೊಪ್ಸಿ ಬಂದೆ. 'ಹಿಂದಿನ ಬಾಕಿಲು ಹಾಕು' ಅಂದ ಶಾಮಿ. 'ಬೀದೀ ಬಾಕಿಲು ಹಾಕು' ಅಂದ ಎಡಡೂಬಿಗಿದೆ. ನಾವು ಊಟ ಮಾಡಿ ಗೋಡೇಗೇ ವಾಲಿಸಿದ ಮಣೆಗ್ಳಲ್ಲಿ ಒಂದನ್ನೆತ್ಕೊಂಡು, ರಬ್ಬರ್ ಬೂಡ್ಸ ಹಾಕ್ಕೊಂಡಿದ್ದದ್ದು, —. ನಿಶ್ಶಬ್ದವಾಗಿ ಕೋಣೇನ ಸಮೀಪ್ಸಿ — ಈಗ ನನ್ನೆದ್ರುಗೆ ಆಗ್ತ ಇರೋ ಹಾಗೆ ಇದೇ ಘಟ್ಟನೆ ಟಾರ್ಚ್ನ ಸ್ವಿಚ್ ಮಾಡಿ ಮಣೇನ ಗುರಾಣಿ ಹಾಗೆ ಮುಂದಕ್ಕೆ ಹಿಡುಕೊಂಡು ಟಾರ್ಚಿನ ಬೆಳಕ್ನ ಹಾವಿನ ಮುಖಕ್ಕೆ ಹಿಡೀತ "ಹುಸ್ ಹುಶ್" ಅನ್ನುತ್ತೀವೆ ಶಾಮಿ, ನಿಂತಿದಾನೆ ಇವನು, ಸರಾಸರಿ ಇವನೆತ್ರ ಎದ್ಬಾಗಿತ್ತು ಆ ಹಾವು! "ಫಟ್" ಅಂತ ಶಾಮೀ ಕಡೆ ಹೊಡೆದ ಜ್ಞಾಪಕ. ಆ ಪೆಟ್ಟು ಶಾಮೀ ಕೈಲಿದ್ದ ಮಣೆಗೆ ತಗು ಲಿದ್ದು ಜ್ಞಾಪಕ! ಮತ್ತಿರುಗಿ ಹೊಡೆಯೋಕೆ ಆ ಹಾವು ಹೆಡೇನ ಹಿಂದಕ್ಕೆ ಬೀಸೋವಾಗ ತಾಕಿದ ಗೋಡೆ ಬಿಡೋಷ್ಟ್ರಲ್ಲೇ ಒಂದೇ ಹಾರು ಶಾಮೀ ಹಾರಿ ಆ ಗೋಡೆ ಸಮೇತ ಆ ಹಾವ್ನ ಮಣೆಯಿಂದ ಅದುಮ್ಕೊಂಡ. ಅರ್ಧಾಡಿ ಕೂಡ ಇಲ್ಲ ಮಣೇ ಮೇಲೆ ಹಾವಿನ ಹೆಡೆ. ಮಿಕ್ಕದ್ದೆಲ್ಲಾ ಅಮುಕ್ಕೊಂಡಿಧಾನೆ ಗೋಡೇಗೆ ಮಣೆಯಿಂದ ಶಾಮಿ. ಕೆಳಗೆ ಬಾಕಿ ಒದ್ದಾಡ್ತಿದೆ ಹಾವಿನ ಬಾಲ.

ಮಲಗಿದ್ದ ಅಳಿಯನ್ನ ಒಂದೇ ಒದೆ ಒದ್ದು ಎಬ್ಸಿ, ತಲೆ ತಿರುಗಿಸ್ದ, "ಶಾಮಿ, ಎಳಕೊಂಡು ಹೋಗು ಇವನ್ನ! ಹೊರಗ್ಬಿಟ್ಬಿಟ್ಟು ಮನೇಲಿರೋ ದೀಪಾನೆಲ್ಲಾ ತಂದ್ಬಿಡು, ಅಳಿಯಂದಿರ ಪ್ರಾಣಗಳ ಮೇಲೆ ಆಸೆ ಬಿದ್ದಿರೋ ಈ ಹಾವ್ನಾತೀನ ಜೀವ ಸಹಿತ ಬಿಡಬಾರ್ದು. ಒಂದು ಗಳು ಒಂದ್ಹತ್ತಡಿ ನೂಲುಹಗ್ಗ" ಅಂದ. ಬೆಚ್ಚಿಬಿದ್ದು ಎದ್ದ ಅಳಿಯ ಸುತ್ತಮುತ್ತ ನೋಡೋಕೆ ಮುಂಚೆ ಹೊರಗೆಳ ಕೊಂಡು ಹೋಗಿ ಜೀವ ಸಹಿತ ನನ್ನ ತಂಗೀ ಕಾಲಿಗೆ ಕೆಡವಿ, ಶಾಮಿ ಹೇಳಿದ ಹಾಗೆ ಎರಡು ಸೀಮೆಯೆಣ್ಣೆ ದೀಪಗ್ಳು, ನೂಲು ಹಗ್ಗ, ಒಂದು ಗಳು ತಂದಿಟ್ಟೆ. ಇನ್ನು ಆ ಹಾವ್ನ .... ಸುಮಾರು ಆರಡಿಯಾದ್ರೂ .... ಇದ್ದಿರ ಬೇಕು. ಗೋಡೇಗೆ ಮಣೇ ಸಮೇತ ಅದುಮಿಕೊಂಡಿದ್ದಾನೆ ಶಾಮಿ. ಈ ಗಳೂನ ಮಣೇಗೆ ಸರಿಯಾಗಿ ಮಧ್ಯದಲ್ಲಿಟ್ಟು ಆ ಹಾವ್ನೂ ಮಣೇನೂ ಗಳೂನ ಗೋಡೆಗೆ ಕಾಲಿಂದ ಅದುಮಿಕೊಂಡು ಎರಡುಕೈಯಿಂದ ನೂಲೇಣೀನ ಸುತ್ತ್ಯಾಕಿ ಸುತ್ತ್ಯಾಕೀ ಅದ್ಹೇಗೆ ಬಿಗಿದ್ನೋ .... ಎದ್ರುಗೇ ನಿಂತಿದ್ದ ನನಗೆ ಅರ್ಥವೇ ಆಗ್ಲಿಲ್ಲ. 'ಆ ಕೊನೇ ಹಿಡುಕೋ ಹುಷಾರೂ' ಅಂತ ಗಳುವಿನ ಒಂದು ಕೊನೆ ನನ್ನ ಕೈಲಿ ಕೊಟ್ಟದ್ದು ಜ್ಞಾಪಕ, ಇನ್ನೊಂದ್ ಕೊನೆ ಅವನೆತ್ಕೊಂಡದ್ದು ಜ್ಞಾಪಕ. ಮಣೇಗೂ ಗಳುಗೂ ನೂಲೇಣಿ ಹಾಗೆ ಬಿಗಿದು ಒದ್ದಾಡ್ತಿರೋ ನಾಗರಹಾವ್ನ ಅವನಿಷ್ಟದ ಪ್ರಕಾರ ಹೊತ್ಕೊಂಡ್ಹೋದ್ವಿ, ಹಿತ್ತಲ ತೋಟಕ್ಕೆ ಇಳಿಸಿದ್ವಿ. ಆಗ್ಲಾದ್ರೂ ಕಲ್ಲೋ ಮಣ್ಣೋನೋ ತಗೊಂಡು ಚಚ್ಚಿ ಕೊಲ್ಬಾರ್ದಾಗಿತ್ತೇ ಆ ಹಾವ್ನ! ಉಹುಂ! ಶಾಮಿಯ ಸೇಡು ತೀರ್ಬೇಕಲ್ಲ. ಜೋಬಿಂದ ಒಂದು ಪೆನ್ನೈಫ್ ತೆಗೆದು ಅಲ್ಲೇ ಇದ್ದ ಹುಣಸೇ ಮರದಲ್ಲಿ ನಾಲ್ಕಾರು ಛಡಿಗಳು ಕತ್ತರಿಸಿಕೊಂಡು ಮಣೇನ ನೆಲದ್ಕಡೆ ಕಟ್ಟಿದ. ಹಾವು ಮೇಲ್ಗಡೆ .... ಹೊಡೆದಾ ಹೊಡೆದಾ ಹೊಡೆದಾ ನೋಡೀ ಆ ಹಾವ್ನ! ಆ ನಾಲ್ಕು ಛಡಿಗ್ಳು ಕಿತ್ತು ಕಡ್ಡಿಯಾಗೊವರ್ಗೂ ಹೊಡೆದಾ ................
"ಸಾಯಿ ಸಾಯಿ .... ಆದ್ರೆ ನಮ್ಮಸೇಲಿ ಈಗ್ಬ್ಯಾ ನರುಳೋ ಹಾಗೆ ನೊಂದೂ ನೊಂದೂ ಸಾಯಿ! ನೀನಲ್ವೇ ಕಡಿದಿದ್ದು? ನೀನಲ್ದಿದ್ರೇನೂ ನಿಮ್ಮಪ್ಪ, ನಿಮ್ಮಣ್ಣ ನಿಮ್ಮಮ್ಮ ಕಡಿದಿರಬಹುದು. ನಿನ್ನೀ ಹಾಳು ಹಾವಿನ ಜಾತೀ ಜಾತೀನೆ ನಿರ್ಮೂಲವಾಗೋವರಿಗೂ ನನ್ನ ಮುಯ್ಯಿ ತೀರೋದಿಲ್ಲ" ಅಂತ ಆ ಹಾವ್ನ ಹೊಡೆದೂ ಹೊಡೆದೂ, "ಒಂದೆಂಟ್ಹತ್ತು ಸೌದೆ ಒಂದು ಸೀಸೆ

ಸೀಮೆಯೆಣ್ಣೆ ತಾ" ಅಂದ. ಒಂದೂ ತೋಚ್ದೆ, ಅವನು ಕೇಳಿದ್ನ ತಂದಿಡುತ್ಲೆ ಮಣೇಗೆ ಕಟ್ಟಿ ಇವನ ಹೊಡೆತದಲ್ಲಿ ಒಂದೊಂದು ನರಾನು ಕಿತ್ತು ರಕ್ತದಲ್ಲಿ ತೊಯ್ದ್ಹೋದ್ರು ಇನ್ನೂ ಬುಸುಗುಟ್ತಿರೋ ಹಾವಿನ್ಮೇಲೆ ಸೌದೇನ ಪೇರ್ಸಿ ಸೀಮೆ ಯೆಣ್ಣೇನೂ ಸುರ್ದು ಜೋಬಿಂದ ಬೆಂಕಿಪೆಟ್ಟಿಗೆ ತೆಗೆದು ಕಡ್ಡಿಗೀಚಿ, ಸೌದೇ ಗಿಟ್ಟ, ಅದೇ ಉರೀಲಿ ಒಂದು ಸಿಗರೇಟ್ನ ಹತ್ತಿಸ್ಕೊಂಡು ಸೇದ್ತಾ ನಿಂತಿದಾನೆ ಶಾಮಿ. ಹಿಂದೆಲ್ಲ ಮನೆವ್ರು. ಒಂದ್ಕಡೆ ಅಳಿಯ್ನ ಅಪಾಯದಿಂದ ಹತ್ತಿದ ಬೆದರ್ಕೆ ಇನ್ನೂ ಹೋಗ್ಲಿಲ್ಲ. ಅವನು ಬದುಕಿಬಂದ ಸಂತೋಷ ಇನ್ನೂ ಹತ್ತಿಲ್ಲ ಮನಸ್ಗೆ. ಇನ್ನೊಂದು ಕಡೆ ಅಳಿಯನ್ನ ಬದುಕಿಸ್ದ ಶಾಮಿಮೇಲಿನ ಮಮತೆ—ಅವನು ಕೈಗೆ ಸಿಕ್ಕಿದ ಹಾವ್ಗೆ ಮಾಡ್ತಿರೋ ಚಿತ್ರಹಿಂಸೆಯ ಅಸಹ್ಯ ದಲ್ಲಿ ಕೊಚ್ಕೊಂಡೇ ಹೋಯ್ತು! ಎಲ್ಲಾ ನೋಡ್ತಿದಾರೆ. ಬೀಗಿತಿ ಮಾಟ್ಬ್ಗ ಮುಂದಕ್ಕೆ ಬಂದು "ಇದೇನ್ಮಗು? ನಾವು ಇವತ್ತು ಇದ್ದ ವಿಪತ್ತಿನ ಪರಿಹರಿ ಸೋಕೆ ಪರಮಾತ್ಮನೇ ಕಳುಹಿಸಿದ್ದಿರಬೇಕು ನಿನ್ನ. ನಮ್ಮ ಪಿತೃಗಳಿಗೆ ಪಿಂಡಕ್ಕೆ ದಾರಿ ನನಗೊಬ್ನೇ ಮಗ. ಅವನ್ನೂ ಅಪಮೃತ್ಯು ಬಾಯಿಂದ ತಪ್ಪಿಸ್ದೆ. ನನ್ನ ಸೊಸೆ ಮಗಳಿಗಿಂತ ಜಾಸ್ತಿ ನನಗೆ. ನಿನ್ನ ಸ್ನೇಹಿತನ ತಂಗಿ! ಅವಳ ಮಾಂಗಲ್ಯಾನೂ ರಕ್ಷಿಸ್ದೆ. ಆದರೂ ಇದಕ್ಕೆಲ್ಲಾ ಕಾರಣ ಆ ಹಾವು: ಅರಿಯದ ಜಂತು. ಏನೋ ನಮ್ಮ ಭಕ್ತಿ ಸುಬ್ರಾಯನ ಷಷ್ಠೀ ದಿನ ಪರೀಕ್ಷಿ ಸೋಕೇ ಆ ಹಾವ್ನ ಕಳಿಸಿ, ರಕ್ಷಿಸೋಕೆ ನಿನ್ನೂ ಕಳುಹಿಸಿದ ದೇವ್ರು. ಈ ಅನ್ಯಾಯ ಹಿಂಸೇನ ಒಪ್ಪ್ಯನೇ? ಹಾವಾಗ್ಲಿ ಹುಲಿಯಾಗ್ಲಿ .... ದುಷ್ಟಮೃಗ ಗಳ್ನ ಕೊಲ್ಲೋದು ಪಾಪವಲ್ಲ. ಜೀವಸಹಿತ ಹೀಗೆ ದಹಿಸೋದ್ನ ದೇವ್ರೊ ಪ್ಪ್ಯನೇ ಮಗು? ಅನ್ನುತ್ಲೆ ನಮ್ಮ ಶಾಮಿ ಕಣ್ಣುಗ್ಳು ಕಿಡಿ ಹಾರಿಸ್ತಾ "ಈ ಹಿಂಸೆ ಒಪ್ಪ್ಯನೇ ಅಂತೀರಾ ದೇವ್ರು? ಹಮ್ಮಯ್ಯ! ಇದಕ್ಕಿಂತ ಅನ್ಯಾಯ ಹಿಂಸೆ ನನಗೂ ನನ್ನ ತಂಗೀಗೂ ನಮ್ಮನೇಗೆಲ್ಲಾ ತಂದಿಟ್ಟ ನಗ್ತಿದ್ದ ದೇವ್ರು ಈ ಹಿಂಸೆಗೇನೂ ಹೇಸ್ಗೆ ಪಡೋಹಾಗಿಲ್ಲ!" ಅಂತಾ ಶಾಮಿ ಎರಡು ಕೈಯಿಂದಲೂ ಮುಖವನ್ನು ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳ್ತ ಕೂತ್ಕೊಂಬಿಟ್ಟ. ಬೀಗ್ತಿ ಚಿನ್ನದಂಥ ಹೆಂಗ್ಸು. ಚಿನ್ನದಂಥ ಹೃದಯ, ಹೇಗಿದ್ರೂ ಹೊತ್ತೊಟ್ಟೆ ಹೆತ್ತೊಟ್ಟೆ. ಧಾಂಡಿಗನಾದ ಗಂಡ್ಸು ನನಗೆ ತಿಳಿಯದ ವಿಷಯ ಎಷ್ಟು ಮಂದಟ್ವಾಯಿತೋ ಕಾಣೆ ಆಕೆಯ ಮನಸ್ಸಿಗ;

ಶಾಮಿ ಹತ್ತಿರ ತಾನೂ ಕುಳಿತು, "ಮಗೂ, ನೀನೇನು ಮಾಡಿದ್ರೂ ನಾವು ಬೇಡ ಅನ್ನೋ ಹಾಗಿಲ್ಲ. ನೀನು ಯಾರೂಂಬೋದು ನನಗಿನ್ನೂ ಗೊತ್ತಿಲ್ಲ. ಆದ್ರೂ ಹೋಗೇಬಿಟ್ಟಿದ್ದ ನಮ್ಮ ಹುಡಗ ನಿನ್ನಿಂದ ಬದುಕಿದ. ನೀನು ಯಾರಾದ್ರೂ, ನಮ್ಮನೇಗೆ, ನನ್ನ ಭಾಗಕ್ಕೆ ದೇವ್ರು. ಆದರೂ ಈ ಹಾವಿನ ಮೇಲೆ ನಿನಗಿರೋ ಛಲಾನ ಗಮನಿಸಿದ್ರೆ .... ನಿಮ್ಮನೇಲಿ ಏನೋ ಅನಾಹುತ .... ಶಾಮಿ ಮುಖಾನ ಸವರ್‍ತ "ಹೇಳು ಮಗು .... ದುಃಖಾಂಬೋದು ಮನಸ್ನಲ್ಲೇ ಇಟ್ಕೊಂಡ್ರೆ ಹೃದಯಾನ ತಿಂದುಬಿಡುತ್ತೆ. ಇಷ್ಟ್ರಿಗೆ ಹೇಳ್ಕೊಂಡ್ರೆ .... ಕಮ್ಮಿ ಆಗುತ್ತೆ ದುಃಖ! ಹೇಳು ಮಗು!" ಅನ್ನುತ್ಲೂ ಶಾಮಿ "ಹೇಳೋ ದೇನಿದೆಯಮ್ಮಾ! ನಾನೂ ನನ್ತಂಗಿ ಅವಳಿಜವ್ಳಿ. ನಮ್ಮ ಚಿಕ್ಕ ವಯಸ್ಸಿನಲ್ಲೇ ತಂದೇತಾಯೀನ ಕಳಕೊಂಡ್ವಿ. ನಮ್ಮಿಬ್ಬರ್‍ನ ತಮ್ಮಕ್ಕಳಹಾಗೆ ಎತ್ತಿ ಆಡ್ಸಿ ಬೆಳಸಿ ಮುಂದಕ್ಕೆ ತಂದೋವ್ರು ನಮ್ಮ ಸೋದರತ್ತೇನೂ ಆಕೆ ಗಂಡ್ನೂವೆ. ನಮ್ತಂದೆ ಬಿಟ್ಟಿಟ್ಟುಹೋದ ಭೂಮಿ ಕಾಣೇನೂ ತಮ್ಮಾಸ್ತೀಗಿಂತ ಹುಷಾರಾಗಿ ನೋಡ್ಕೊಳ್ತ ತಮಗೆ ಮಕ್ಕಳಿಲ್ದಿದ್ರೂವೆ ನನ್ನೂ ನನ್ತಂಗೀನ್ನೂ ತಮ್ಮಕ್ಕಳ ಹಾಗೆ ಬೆಳಸಿದ್ರೂಮ್ಮಾ. ನಾನು ನಿಮ್ಮ ಶಾಮಿ ಜೊತೇಲಿ ಓದ್ತಿದ್ದೆ ಹೈಸ್ಕೂಲ್ನಲ್ಲಿ. ಆಗ ವರ ನಿಶ್ಚಯ ಆದ್ದು ನನ್ತಂಗೀಗೆ. ಜಹಗೀರ್ದಾರ್‍ರ ಮಗ. ಮೈಯಿ ಮುಖ, ಬುದ್ಧಿ, ಗುಣ ಚಿನ್ನದಹಾಗೆ. ನಮ್ಮತ್ತೆ ಮಾವನ ಸಂತೋಷಕ್ಕೆ ಎಣೆಯೇ ಇಲ್ಲ. ಸಾವಿರಾರು ರೂಪಾಯಿ ಖರ್ಚು ಮದುವೇಗೆ. ಬೀಗರಿಗೂ ಬೀಗರಿಗೂ ಪೋಟಾಪೋಟಿ ಖರ್ಚು. ಮದುವೇನೂ ಆಯ್ತು. ನಾಗೋಲೀದಿನಾಮ್ಮಾ; ನಮ್ಮ ಬಂಗಲೇ ಎದುರು ಬಂಗಲೇಲಿ ವರ ಇಳದಿದ್ದದ್ದು. ಕೊನೇ ಉರಟಣೆ ಒಂದಾಗಬೇಕು ನಮ್ಮನೇಲೀಂತ ಆಸೆ ನಮ್ಮ ಸೋದರತ್ತೆಗೆ. ಸಾಯಂಕಾಲ ನಮ್ಮನೇ ಹೆಂಗಸ್ರೆಲ್ಲಾ ವಾದ್ಯದ್ಸಮೇತ ಕರೆತಂದ್ರು ಅಳಿಯನ್ನ. ನಮ್ಮ ಬಂಗ್ಲೆ ಸೇರಿ ಮೆಟ್ಲು ಮೇಲೆ ಕಾಲಿಡ್ತಿದಾನೆ ಅಳಿಯ "ಹಯ್ಯೋ, ಎಡಗಾಲು ಮೊದಲು ಇಡಬೇಡಿ"ಂತ ಒಬ್ಬ ಮುದಿ ಮುತ್ತೈದೆ ಹೇಳುತ್ತಿದ್ದಹಾಗೇನೇವೇ ಆ ಮೆಟ್ಲಂಚಿನ ಮೇಲೆ ಎಡಗಾಲಿಟ್ಟು ಬಿಟ್ಟ—ನಮ್ಮ ಭಾವ ಮೆಟ್ಲಂಚಿನ ಪಕ್ಕ ಗುಲಾಬೀ ಗಿಡಗಳ ಪೊದರು. ಅಳಿಯ ಕಾಲಿಟ್ಟದ್ದು ನೋಡಿದೆ. ಇಟ್ಟಕಾಲ್ನ ರೋಜಾ ಪೊದರಿಂದ ಒಂದು ಹಾವಿನ ಹೆಡೆ ಕುಕ್ಕಿ ಕಣ್ಮರೆಯಾದ್ದು ನೋಡ್ದೆ. ಹಯ್ಯೋಂತ ಬೀಳ್ತಿದ್ದ

ಭಾವನ್ನ ಹಿಡುಕೊಂಡ್ವೀ. ಇನ್ನೇನು ಡಾಕ್ಟ್ರು ಬಂದದ್ದಾಯಿತು, ಮಂತ್ರವಾದಿಗಳಾಯ್ತು, ಏನಾದ್ರೆ ಏನು? ಬೆಳಕು ಹರಿಯೋಕೆ ಮುಂಚೆ ತಾಲಿ ಕಟ್ಟ್ಕೋವ್ನ ನನ್ತಂಗಿ. ಐದು ದಿನದ ಹೆಂಡ್ತಿ. ಹುಡ್ಕಿದೀನಿ ಹುಡ್ಕಿದೀನಿ ನೋಡೀಮ್ಮಾ ಆ ತೋಟವೆಲ್ಲಾ; ನನ್ನ ಅವಳಿಜವಳಿ ತಂಗಿ ಜನ್ಮಾನ್ನೇ ನುಂಗಿದ ಆ ಹಾವ್ನ; ಸಿಕ್ಲಿಲ್ಲ; ಈ ದುಃಖದಲ್ಲೇ ಕೊರಗೀ ಕೊರಗೀ ಸತ್ರು ನಮ್ಮ ಸೋದರತ್ತೇನೂ ಮಾವ್ನೂ! ನಮಗಿನ್ಯಾರೂ ದಿಕ್ಕಿಲ್ಲ. ಧನ ಧಾನ್ಯ ಎಷ್ಟಿದ್ರೂನೂವೆ ನನಗೆ ನನ್ತಂಗಿ, ನನ್ತಂಗೀಗೆ ನಾನು; ಅದೇಮ್ಮಾ ನಮ್ಮ ಭಾವನ್ನ ಕೊಂದ ಹಾವಿಗೆ ನಾವಾಗ್ಲೀ ನಮ್ಮ ಭಾವನಾಗ್ಲೀ ಒಂದು ಪಾಪವೂ ಮಾಡಲಿಲ್ಲವಲ್ಲಮ್ಮಾ? ಆದ್ರು .... ಏನೋಮ್ಮಾ ಆ ಹಾವು ಜಾತೀಂದ್ರೆ .... ಪ್ರಾಣಸಹಿತ ಬಿಡೋಕೆ ನನ್ನಿಂದ ಆಗದು ...."!

**ಯಾ**ಕೆ ಹೇಳ್ತೀನೆ ಗುಡಿಕಟ್ಟಿ, ವಿಗ್ರಹಾನ್ನ ಬ್ರಾಹ್ಮಣರು ಪ್ರತಿಷ್ಠಿಸಿ, ವರ್ಷ ವರ್ಷಾನೂ ಪೂಜೇ ಆಗ್ತಿರೋ ಕಲ್ಲುಗೊಂಬೇನ ಪೂಜೇ ಮಾಡೋದು ಸರಿಯೋ ತಪ್ಪೋಂತ ವಾದಿಸ್ತಿದೀರಲ್ಲ ನೀವೆಲ್ಲಾ! ಇಂಗ್ಲೀಷ್ ಮೋಜ ಹಾಕ್ಕೊಂಡು ಬಣ್ಣದ ಕಾಲ್ಚೀಲ, ಬಣ್ಣದ ಷರಟು, ಕ್ರಾಪ್ ತಲೆ, ಬಾಯಲ್ಲಿ ಸಿಗರೇಟು,-- ನಮ್ಮ ಶಾಮಿ ಮದರಾಸ್‌ನಲ್ಲಿ ಫುಟ್‌ಬಾಲ್ ಆಡ್ತಿದ್ದಾಗ ತೆಗೆದು ನನಗೊಂದು ಕಾಪಿ ಕಳಿಸಿದ ಫೋಟೋ,—ಅದ್ನ ಕಟ್ಟ್ಸಿಕ್ಸಿ ಅದೇ ಕೋಣೇಲಿ ಅದೇ ಚಿನ್ನ ಬೆಳ್ಳಿ ಚಾಮುಂಡಿ ಪ್ರಭೃತಿಗಳ ತಲೇ ಮೇಲೆ ತಗುಲ ಹಾಕಿದ ತಪ್ಸೀರ್ನ ನನ್ನ ತಂಗೀನೂ ಭಾವ್ನೂ ಪೂಜೆ ಮಾಡೋದು ತಪ್ಪೇ ನೆಪ್ಪೇಂಬೋದ್ನ ನಾನ್ನಿಷ್ಕರ್ಷಿಸಲಾರೆ. ಒಂದು ವೇಳೆ ನೀವುಗಳು ...............!

ಶೆಟ್ರು—ಮಂಚಿ ಮಾಟಾಂಟಿ! ತಪ್ಪೆಕ್ಕಡವಚ್ಚೆ? ರಾಮುಡೇಮಿ, ಕೃಷ್ಣುಡೇಮಿ, ಪೆದ್ದ ಪೆದ್ದ ಯುಗಮುಲೋ ವಚ್ಚಿನ ಪೆದ್ದಾತಾರಮುಲು ಪೇದವಾಳ್ಳ ರಕ್ಷಣಾನಿಕಿ ಪರಮಾತ್ಮುಡು ಪೆದ್ದಾತಾರಮು ಎತ್ತಿನ ಐಕಟ್ಟು. ಈ ಚಿನ್ನ ಯುಗಮುಲೋ ಕಲಿಯುಗಮುಲೋ ಚಿನ್ನ ಚಿನ್ನ ಔತಾರಮುಲು ಎನ್ನಿಯೋ ಎತ್ತುತಾಡು. ಮೋಜ ವೇಸ್ಕೊಂಟೆ ಯೇಮಿ, ಸಿಗರೇಟು ತಾಗ್ತೆ ಯೇಮಿ? ಪದಿ ಜನಾಲ್ನಿ ಬದುಕಿಂಚ್ತೆ.... ಪರಮಾತ್ಮುಡುನಿ ಔತಾರಮು ರೂಪೂ ಎಟ್ಟುಂಟೆ ಯೇಮಿ; ಪರಮಾತ್ಮುಡು ಎತ್ತಿನ ಪಂದಿರೂಪಮು ಎಟ್ಲುಂಡಿನ ಯೇಮಿ

ಭೂದೇವಿನಿ ಬದುಕಿಂಚ ಲೇದಾ? ಈ ಕಲಿಯುಗಂಲೋ ಚಿನ್ನ ಚಿನ್ನ ಔತಾರಮ್ಲು ಎನ್ನಿಯೋ ಎತ್ತುತಾನೇ ಉಂಟಾಡು ದೇವುಡು—ಲೇಕಪ್ರೋತೆ ವಾನ್ನಿಕೂರ್ಚೇದೇನ್ನಿ? ಎನಮು ಪ್ರೋತ ಸಲ್ಲಗ ಉಂಡೇದಾನ್ಕ? ಕಾದು. ನ್ಯಾಲ ತಡ್ಚಿ ಪೈರು ಪಂಡಿ ಪದಿಜನಾಲ ಕಡುಪು ನಿಂಡೇದಾನ್ನಿ. ಪೆದ್ದಾವ್ಳ್ಳು .... ಮೀರು ಚೆಪ್ಪಿತ್ರೇ ಶಾಮಣ್ಣವಾಳ್ಳ ಕಥ .... ಅಟುವಂಟಿ ಪದಿ ಔತಾರಮುಲು ಇಪ್ಪುಡು ಕೂಡಾ ಉಂಡುಟ್ನೇ ವಾನ ಕೂರ್ಚೇದಿ. ಗುಡ್ಲೋ ರಾಯ್ತೋ ಚೇಸ್ತೇ ಯೇಮಿಾ ಇಂಡ್ಲಲೋ ತಪ್ಪೀರು ಪೆಟ್ಟೆತ್ರೇಯೇಮಿ ....!?

ಶಾಮಣ್ಣ—(ಗುಡಿಯ ಬಾಕಿಲನ್ನು ಇಣಕಿ ಹೊರಗೆ ನೋಡಿ) ಇಕೋ ಶಾಮಿ ಬಂದ ....

ಶೆಟ್ರು—ಇದೇಮಿದಿ! ಈ ಪಿಲ್ಲಕಾಯಾ ....? ಬೀ. ಯೆ. ಪ್ಯಾಸ್ಚೇಸಿ ಪಾಮುನಿ ಚಂಪಿಂದಿ ....!?

ಶಾಮಣ್ಣ—ಬೆಚ್ಚು ಬೀಳ್ಬೇಡಿ! ಇವನವನಲ್ಲ .... [ಘಟ್ಟಿಯಾಗಿ] ಮೆಲ್ಲಗೋ ಶಾಮಿ, ಮುರಿದ ಮೆಟ್ಲು .... ಜಾರಿಬಿದ್ದು ಮೊಣಕಾಲು ಮುರ ಕೊಂಡೀಯ! ಮೆಲ್ಲಗೆ ಬಾ (ಎದ್ದು ನಿಂತು) ಈ ಶಾಮಿಾ ಆ ಶಾಮಿಾ ಅಲ್ಲ. ನನ್ನ ಸೋದರಳಿಯ. ನನ್ನ ತಂಗಿಯ ಮಗ! ಆಗ ಗರ್ಭದಲ್ಲಿದ್ದ! ಆ ಶಾಮಿಾ ಹಾಗೇ ಆಗ್ಬೇಕೂಂತ ಆಶೆ ಇಟ್ಕೊಂಡು ಶಾಮಿ ಹೆಸರ್ನ ನಮ್ಮ ಭಾವ್ನೂ ನನ್ತಂಗೀನೂ ಇವನಿಗಿಟ್ಟದ್ದು. ನಮ್ಮೂರಿಗೆ ಬಂದಿದ್ದಾರೆ ಇಬ್ರೂ! ಎಳೀಬೇಡ್ರೋ! ಎಳೀಬೇಡ್ರೋ! ಬಂದೆ! ಬರ್ತೀರಾ? ಎಲ್ಲ್ರೂ ಹೋಗೋಣವೇ?



ಆರ್. ಕೃಷ್ಣಶೆಟ್ಟಿ, ಪ್ರಿಂಟರ್, ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.